15

# ಅಚಲ

ಜನವರಿ 2001

ತಿಂಗಳ ಪತ್ರಿಕೆ

ಒಳಗೇನಿದೆ ?



ಜಾಗೃತಿ

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 16    ಸಂಚಿಕೆ - 1

ಸಂಪಾದಕ ಮಂಡಲಿ

ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಬಿ. ಎನ್. ಸುಮಿತ್ರಾಬಾಯಿ
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


Achala - Edited by
Dr. N. Gayathri

Published by
Dr. G. Ramakrishna on
behalf of Jagruthi Mahila
Adhyayana Kendra

*Printed at*
Lipi Mudrana
Bangalore - 560 004


ಆತ್ಮೀಯರೇ,

ಕಳೆದ 15 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ.ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ. ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

ಅಚಲದ ಚಂದಾ ವಿವರಗಳು ಹೀಗಿವೆ:

ವಾರ್ಷಿಕ ಚಂದಾ : ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ : ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಗಮನಿಸಿ

ಅಚಲ ವಿಳಾಸ ಬದಲಾಗಿದೆ

108, ಸ್ಕೈಲೈನ್ ಸುರಭಿ, 14-ಬಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಕೊನೆಗೂ ದಕ್ಕದ ಮಹಿಳಾ ಮೀಸಲಾತಿ ಮಸೂದೆ

ಮತ್ತೊಮ್ಮೆ ಮಹಿಳಾ ಮಸೂದೆ ರಾಜಕೀಯ ಸಂಕಲ್ಪದ ದಿವಾಳಿತನದಿಂದ ನೇಪಥ್ಯಕ್ಕೆ ಸರಿದಿದೆ. ಆಳುವ ರಾಷ್ಟ್ರೀಯ ಪ್ರಜಾಸತ್ತಾತ್ಮಕ ಒಕ್ಕೂಟವು ತನ್ನ ಎಂದಿನ ಬೇಜವಾಬ್ದಾರಿತನದ ಮಹಿಳಾ ವಿರೋಧಿ ನೀತಿಯನ್ನು ಬಹಿರಂಗವಾಗಿ ಪ್ರದರ್ಶಿಸಿದೆ. ಚುನಾವಣೆಯ ಸಂದರ್ಭದಲ್ಲಿ 'ವೋಟಿನ ಬ್ಯಾಂಕು'ಗಳಾಗಿ ಮಹಿಳೆಯರನ್ನು ಭಾವಿಸುವ ರಾಜಕೀಯ ಪಕ್ಷಗಳು ಮಹಿಳಾ ಮೀಸಲಾತಿಯ ಬಗ್ಗೆ ಅನುಕಂಪದ, ಪ್ರೋತ್ಸಾಹದ ಕಣ್ಣೀರನ್ನು ಹರಿಸಿದ್ದೇ ಹರಿಸಿದ್ದು. ಆದರೂ ಚಳಿಗಾಲದ ಅಧಿವೇಶನದಲ್ಲಿ ಮಹಿಳಾ ಮೀಸಲಾತಿ ವಿಷಯವನ್ನು ಚರ್ಚೆಗೆ ಎತ್ತಿಕೊಂಡದ್ದು ಕೊನೆಯ ದಿನಗಳಲ್ಲಿ ಮಾತ್ರ. ಸರ್ಕಾರದ ಈ ಕ್ರಮವೇ ಮೀಸಲಾತಿ ಪರ ಅವರ ಕಾಳಜಿ ಎಷ್ಟಿದೆಯೆಂಬುದನ್ನು ಸೂಚಿಸುತ್ತದೆ.

ಎಂದಿನಂತೆ ಈ ಬಾರಿಯೂ ಮಹಿಳಾ ಮೀಸಲಾತಿಯ ಪ್ರಸ್ತಾಪವು ಲೋಕಸಭೆಯಲ್ಲಿ ಮಂಡಿತವಾದೊಡನೆ ಎಂಥ ಗದ್ದಲ ಸೃಷ್ಟಿಯಾಯಿತೆಂದರೆ, ಮಸೂದೆಯ ಪರ ಇರುವ ಪಕ್ಷಗಳ ಕೆಲ ಸಂಸದರು 'ಮಸೂದೆ ಕೂಡಲೇ ಜಾರಿಗೆ ತನ್ನಿ' ಎಂದು ಆಗ್ರಹಿಸತೊಡಗಿದರೆ ವಿರುದ್ಧವಿರುವ ಪಕ್ಷಗಳ ಸದಸ್ಯರು 'ಮಸೂದೆಯನ್ನು ತಕ್ಷಣವೇ ವಾಪಸ್ಸು ತೆಗೆದುಕೊಳ್ಳಿ' ಎಂದು ಕೂಗತೊಡಗಿದರು. ಈ ರೀತಿ 'ಮಸೂದೆಯನ್ನು ವಿರೋಧಿಸುತ್ತಿದ್ದವರಲ್ಲಿ ಸಮಾಜವಾದಿ ಪಾರ್ಟಿ, ಬಿ.ಎಸ್.ಪಿ ಮತ್ತು ಆರ್.ಜೆ.ಡಿ ಪಕ್ಷದ ಸದಸ್ಯರೇ ನಾಯಕತ್ವ ವಹಿಸಿದವರು. ಈಗ ಕೇಳುತ್ತಿರುವ 33 ಶೇಕಡ ಮಹಿಳಾ ಮೀಸಲಾತಿಯಲ್ಲಿ ಶೇಕಡ 20 ರಷ್ಟನ್ನು ಹಿಂದುಳಿದ ಜಾತಿ, ಪಂಗಡಗಳಿಗೆ ಮೀಸಲಾಗಿರಿಸಬೇಕೆಂಬ ವಾದವೇ ಹೆಚ್ಚು ಕೇಳಿ ಬರುತ್ತಿತ್ತು. ಆದರೆ ಮಹಿಳಾ ಮೀಸಲಾತಿ ಪರ ಕೂಗು ಅಷ್ಟೇ ಗಟ್ಟಿಯಾಗಿ ಕೂಡ ಕೇಳಿಬಂತು. ರಾಷ್ಟ್ರೀಯ ಪ್ರಜಾಸತ್ತಾತ್ಮಕ ಒಕ್ಕೂಟದ ಭಾಗವಾದ ತೃಣಮೂಲ ಕಾಂಗ್ರೆಸ್ಸಿನ ನಾಯಕಿ ಮಮತಾ ಬ್ಯಾನರ್ಜಿಯವರೂ ಕೂಡ ಮಸೂದೆಯ ಪರವಾಗಿ ದನಿಯೆತ್ತಿದ್ದು ಕಂಡು ಬಂತು.

ಈ ಎಲ್ಲ ನಾಟಕದಿಂದ ಒಂದಂಶವಂತೂ ಸ್ಪಷ್ಟವಾಗಿ ಕಂಡು ಬರುತ್ತದೆ. ಬಹಿರಂಗವಾಗಿ ತಾವು ಮಸೂದೆಯ ಪರವಿದ್ದೇವೆಂದು ಹೇಳಿಕೊಳ್ಳುವ ಪಕ್ಷಗಳೂ ಮೀಸಲಾತಿ ಪರವಾಗಿಲ್ಲ. ಬಿಜೆಪಿಗೆ ತನ್ನ ಪಕ್ಷದೊಳಗಿನ ವಿರೋಧವನ್ನು ಹತ್ತಿಕ್ಕಲು ಸಾಧ್ಯವಿಲ್ಲ. ಮಸೂದೆಯ ಪರ ನಾಟಕವಾಡಿದ ರಾಷ್ಟ್ರೀಯ ಪ್ರಜಾಸತ್ತಾತ್ಮಕ ಒಕ್ಕೂಟದ ಬಹಳಷ್ಟು ಪಕ್ಷಗಳ ಕಳಕಳಿ ಪ್ರಾಮಾಣಿಕವಾದದ್ದಾಗಿದ್ದರೆ ಆಗ ಮೀಸಲಾತಿಯ ಮಸೂದೆಯ ಮಂಡನೆ, ಚರ್ಚೆ ಅಸಾಧ್ಯವಾಗುತ್ತಿರಲಿಲ್ಲ. ಕಾಂಗ್ರೆಸ್, ತೃಣಮೂಲ ಮತ್ತು ಎಡ ಪಕ್ಷಗಳು ಹಾಗೂ ಬಿಜೆಪಿ ಪಕ್ಷವೂ ತನ್ನ ಸದಸ್ಯರಿಗೆ 'ವಿಪ್' ನೀಡಿ ಅಧಿವೇಶನದಲ್ಲಿ ಕಡ್ಡಾಯವಾಗಿ ಭಾಗವಹಿಸಲು ಆದೇಶಿಸಿತ್ತು. ಇಷ್ಟೆಲ್ಲ ಸಿದ್ಧತೆಗಳಿದ್ದರೂ ಮಸೂದೆ ಚರ್ಚೆಗೆ ಬರಲೇಕೆ ತೊಂದರೆ? ರಾಮ ಮಂದಿರ ಉರುಳಿಸಲು ನೆರವಾದ ಆರೋಪ ಹೊತ್ತ ಆದ್ವಾನಿ ಮತ್ತು ಉಮಾಭಾರತಿಯವರ ರಾಜೀನಾಮೆ ಕೇಳುತ್ತಿದ್ದ ಪ್ರತಿಪಕ್ಷಗಳ ವಿವಾದದ ಸಂದರ್ಭದಲ್ಲಿ 'ಮತಗಣನೆ'ಯನ್ನು ಸಮಸ್ಯೆಗೆ ಪರಿಹಾರವೆಂದು ಭಾವಿಸಿದ ತಂತ್ರವನ್ನೇ ಇಲ್ಲೂ ಏಕೆ ಅನ್ವಯಿಸಲಿಲ್ಲ? ಅದನ್ನು ಪ್ರತಿಪಕ್ಷಗಳೂ ಕೂಡ ಏಕೆ ಒತ್ತಾಯಿಸಲಿಲ್ಲ? ಅಂತೂ 'ಹೆಣ್ಣಿನ ಸಮಸ್ಯೆ'ಯನ್ನು ಅಧಿವೇಶನದ ಕೊನೆಯ ದಿನಕ್ಕೆ ತಳ್ಳಿ ತಾಂತ್ರಿಕ ಗಿಮಿಕ್ ಮಾಡಿ ನೇಪಥ್ಯಕ್ಕೆ ಸರಿಸುವುದರಲ್ಲಿ ಆಳುವ ಸರ್ಕಾರ ಯಶಸ್ವಿಯಾಯಿತು. 'ಭಾರತೀಯ ಸಂಸ್ಕೃತಿ'ಯ ಗುತ್ತಿಗೆ ಹಿಡಿದುಕೊಂಡವೆಂದು ಮೆರೆಯುತ್ತಿರುವವರು ಜೋಪಾನವಾಗಿ ಮಹಿಳಾ ಮೀಸಲಾತಿಗೆ ಮತ್ತೊಮ್ಮೆ ಬುರ್ಕಾ ಹಾಕಿ ಗೃಹ ಬಂಧನದಲ್ಲಿಟ್ಟಂತಾಯಿತು.

ಈ ಸಂದರ್ಭದಲ್ಲಿ ತಮ್ಮ ಚಾಣಾಕ್ಷತನವನ್ನು ಮೆರೆಯಲು ಹೊರಟ ಬಿಜೆಪಿ ಬುದ್ಧಿವಂತಿಕೆಗೆ ಕೊನೆಯೇ ಇಲ್ಲ. ಚುನಾವಣಾ ಆಯೋಗದ ಆಯುಕ್ತರಾದ ಡಾ। ಗಿಲ್‌ರ ಸಲಹೆ ಮೇರೆಗೆ ಜನತಾ ಪ್ರಾತಿನಿಧ್ಯದ ಆ್ಯಕ್ಟನ್ನು ಬಳಸಿಕೊಂಡು ಪ್ರತಿರಾಜಕೀಯ ಪಕ್ಷಗಳು ತಮ್ಮಲ್ಲಿ ಟಿಕೇಟು ನೀಡುವಾಗಲೆ 33ರ ಶೇಕಡ ನೀತಿಯನ್ನು ಅನುಸರಿಬೇಕೆಂಬ ನೀತಿಯನ್ನು ಬೆಂಬಲಿಸಿತು. ಆಂತರಿಕವಾಗಿ ಹುಟ್ಟದ ಮಹಿಳಾ ಪರ ಕಳಕಳಿ ಇಂತಹ ಕಾಯಿದೆಗಳಿಂದ ಪಕ್ಷಗಳ ನೇತಾರರಿಗೆ ಹುಟ್ಟಿಬಿಡುವುದೇ? ಆಗಲೂ ಪಕ್ಷಗಳು ಗೆಲ್ಲದಂಥ ಸ್ಥಳಗಳಲ್ಲಿ ಮಾತ್ರ ಮಹಿಳೆಯರಿಗೆ ಟಿಕೇಟು ಕೊಡುವ ಸಾಧ್ಯತೆಯಿರುವುದಿಲ್ಲವೇ? ಒಂದು ವೇಳೆ ಪಕ್ಷಗಳು ಒಳ್ಳೆಯ ಸ್ಥಳಗಳಲ್ಲಿ ಮಹಿಳಾ ಸದಸ್ಯರಿಗೆ ಟಿಕೇಟು ಕೊಟ್ಟರೂ, ಅದು ತಮ್ಮ ಹೆಂಡತಿ, ಮಗಳು, ತಾಯಿಯರಿಗೆ ಆಗಿರಬಹುದಲ್ಲವೇ? ಆದ್ದರಿಂದ ಸಂವಿಧಾನದ ಹೊರಗೆ ನಡೆಯಬೇಕಾದ ಈ ಎಲ್ಲ ಸುಧಾರಣೆಗಳೂ ಕೂಡ ಆಂತರಿಕ ಸಂಕಲ್ಪದಿಂದ ಮೂಡಿ ಬರಬೇಕೇ ಹೊರತು ಅದನ್ನು ಕಾಯಿದೆಯನ್ನಾಗಿ ಮಾಡಲು ಸಾಧ್ಯವಿಲ್ಲ. ಹಾಗೆ ಇದು ಈಗ ಕೇಳುತ್ತಿರುವ ಶೇಕಡ 33ರ ಮೀಸಲಾತಿಗೆ ಪರ್ಯಾವಂತೂ ಅಲ್ಲ; ಪೂರಕವಾದ ಸುಧಾರಣೆಯಾಗಬಹುದು ಅಷ್ಟೆ.

ಇನ್ನಾದರೂ ಮಹಿಳೆಯರ ಪರವಾಗಿ ಬಹಿರಂಗ ಸಭೆಗಳಲ್ಲಿ ಮೊಸಳೆ ಕಣ್ಣೀರು ಸುರಿಸುವ ರಾಜಕೀಯ ಪಕ್ಷಗಳಿಗೆ ಮಹಿಳಾ ಮತದಾರರು ಬುದ್ಧಿ ಕಲಿಸಬೇಕು. ಮಹಿಳೆಯರ ಪರವಾಗಿ ಭಾಷಣ ಮಾಡುವುದನ್ನು ನಿಲ್ಲಿಸಿ ಸೂಕ್ತ ಸಮಯದಲ್ಲಿ ಕ್ರಿಯಾಶೀಲರಾಗಿ ಮಹಿಳಾ ಕಾಳಜಿಯನ್ನು ಪ್ರಕಟಿಸಲು ಒತ್ತಾಯಿಸಬೇಕು. ಅಲ್ಲಿಯವರೆಗಂತೂ ಮಹಿಳಾ ಮೀಸಲಾತಿ ನೆನೆಗುದಿಗೆ ಬಿದ್ದೇ ಇರುತ್ತದೆ.

- ಎನ್. ಗಾಯತ್ರಿ

# ಮಹಿಳಾ ವಿಮೋಚನೆ ಮತ್ತು ಸ್ತನದ ಕ್ಯಾನ್ಸರ್

-ನೇಮಿಚಂದ್ರ

ಮಹಿಳಾ ವಿಮೋಚನೆಗೂ ಸ್ತನದ ಕ್ಯಾನ್ಸರಿಗೂ ಏನು ಸಂಬಂಧ ಎನ್ನುವಿರೋ? 'ಸಂಬಂಧವಿದೆ' ಎನ್ನುತ್ತಾರೆ ನಮ್ಮ ತಜ್ಞ ವೈದ್ಯರು. ಇಂದು ಭಾರತದ ನಗರ ಪ್ರದೇಶಗಳಲ್ಲಿ ಸ್ತನದ ಕ್ಯಾನ್ಸರ್ ಅತಿ ವೇಗದಲ್ಲಿ ಹಬ್ಬುತ್ತಿದೆ. 'ಇದಕ್ಕೆ ಕಾರಣ ಮಹಿಳಾ ವಿಮೋಚನೆ' ಎನ್ನುತ್ತಾರೆ ದೇಶದ ಅತಿ ದೊಡ್ಡ ಕ್ಯಾನ್ಸರ್ ಸಂಶೋಧನಾ ಸಂಸ್ಥೆ, 'ಮುಂಬಯಿಯ ಟಾಟಾ ಮೆಮೊರಿಯಲ್ ಆಸ್ಪತ್ರೆ'ಯ ಡಾ. ಇಂದ್ರನೀಲ್ ಮಿತ್ರ!

ಈ ಸುದ್ದಿ, ಸಂಶೋಧನೆಯ ಒಂದಿಷ್ಟು ಹಿನ್ನೆಲೆ ತಿಳಿದುಕೊಳ್ಳೋಣ. 1970ರಲ್ಲಿ ಒಂದು ಲಕ್ಷ ಮಹಿಳೆಯರಲ್ಲಿ 20 ಮಂದಿ ಸ್ತನದ ಕ್ಯಾನ್ಸರಿಗೆ ಗುರಿಯಾಗುತ್ತಿದ್ದರು, ಇಂದು ಈ ಸಂಖ್ಯೆ 28.6ಕ್ಕೆ ಏರಿದೆ. ಪಾಶ್ಚಿಮಾತ್ಯ ಜೀವನ ಶೈಲಿಯನ್ನು ಅಧಿಕವಾಗಿ ಅಳವಡಿಸಿಕೊಂಡ ಮುಂಬಯಿಯ ಪಾರ್ಸಿ ಮಹಿಳೆಯರಲ್ಲಿ ಇದೇ ಸಂಖೆಯ 44 ಇದ್ದರೆ, ಹಳ್ಳಿಗಾಡುಗಳಲ್ಲಿ ಕೇವಲ 8.5 ಇದೆ. ಕೌತುಕದ ವಿಷವೆಂದರೆ, ನಗರ ಪ್ರದೇಶಗಳಲ್ಲೂ ಶ್ರೀಮಂತ ಮಹಿಳೆಯರಲ್ಲಿಯೇ ಸ್ತನದ ಕ್ಯಾನ್ಸರ್ ಹೆಚ್ಚು ಕಂಡು ಬಂದಿದೆ.

ಇದಕ್ಕೆ ಕಾರಣ ಏನು? ಬದಲಾದ ಜೀವನಶೈಲಿ, ತಡವಾದ ವಿವಾಹ, ಹೆಂಗಸರಲ್ಲೂ ಹೆಚ್ಚುತ್ತಿರುವ ಮದ್ಯಪಾನ ಇವಕ್ಕೆ ಮುಖ್ಯ ಕಾರಣ ಎಂದು ವಿಜ್ಞಾನಿಗಳು ಅನುಮಾನಿಸುತ್ತಿದ್ದಾರೆ. ಇಂದು ಪಟ್ಟಣಗಳಲ್ಲಿ, ಮಧ್ಯಮ ಮತ್ತು ಮೇಲ್ಮಧ್ಯಮ ವರ್ಗಗಳಲ್ಲಿ ಬದುಕು ಬಹಳಷ್ಟು ಬದಲಾಗಿದೆ. ಬಿಡುವಿಲ್ಲದ ವೇಗದ ಬದುಕು, ಒತ್ತಡಗಳ ಬದುಕು, ಹಣದ ಹಿಂದೆ ಉಸಿರು ಕಟ್ಟಿ ಓಟುವ ಪಂದ್ಯ. ಯಾಂತ್ರಿಕವಾಗಿ 'ಪ್ರೋಗ್ರಾಮ್' ಮಾಡಿಟ್ಟ ಬದುಕು. ಊಟ ನಿದ್ರೆ, ಯಾವುದಕ್ಕೂ ಪುರಸತ್ತಿಲ್ಲದ ಬದುಕು. ಒಂದು ಸ್ಯಾಂಡ್‌ವಿಚ್ ತಿಂದರೆ ಮಧ್ಯಾಹ್ನದ ಊಟ ಮುಗಿಯಿತು. ಇಡೀ ದಿನ ಕಾಫಿಯ ಮೇಲೆ ಕಾಫಿ, ಪೆಪ್ಸಿಯ ಮೇಲೆ ಪೆಪ್ಸಿ. ಸಂಜೆ ಆದೊಡನೆ ಸ್ನೇಹಿತರ ಗುಂಪು, ಪಬ್‌ಗಳಲ್ಲಿ ಬಿಯರ್, ವೋಡ್ಕಾ, ಜಿಡ್ಡು ಜಿಡ್ಡಾದ ತಂದೂರಿ ಚಿಕನ್. ಮಧ್ಯರಾತ್ರಿಗೆ ಮನೆ, ಹಾಸಿಗೆಗೆ ತೆವಳುವುದು, ಅಲ್ಲಿಗೆ ದಿನ ಮುಗಿಯಿತು. ನಿಜ ಕೈ ತುಂಬುವ ಹಣ, ಬದುಕಿನ ಐಶಾರಾಮಗಳನ್ನೆಲ್ಲ ಕೊಂಡು ತಂದ ಹಣ. ಆದರೆ ಯಾವುದಕ್ಕೂ ಸಮಯವಿಲ್ಲ, 'ಮಗು' ಸದ್ಯದ ಯೋಜನೆಯಲ್ಲಿಲ್ಲ.

ಹೆಣ್ಣು ಮಕ್ಕಳು ಬೇಗನೆ ಋತುಮತಿಯರಾಗುತ್ತಿರುವುದು, ಮುವತ್ತು ದಾಟಿದ ಮೇಲೆ ಗರ್ಭಿಣಿಯರಾಗುವುದು, ಸ್ತನ್ಯಪಾನದ ಸಮಯವನ್ನು ಮೊಟಕಾಗಿಸಿರುವುದು, ತಡವಾಗಿ ಮುಟ್ಟು ನಿಲ್ಲುವುದು, ಇವು ನಗರದ ಹೆಂಗಸರು ಸ್ತನದ ಕ್ಯಾನ್ಸರಿಗೆ ಗುರಿಯಾಗಲು ಮುಖ್ಯ ಕಾರಣವಿರಬೇಕೆಂದು ಅನುಮಾನಿಸಲಾಗಿದೆ. ಕಾರಣ ಇವೆಲ್ಲವೂ ಅಧಿಕ ಮೊತ್ತದಲ್ಲಿ 'ಎಸ್ಟ್ರೋಜೆನ್ ಹಾರ್ಮೋನ್' ತಯಾರಿಸುತ್ತವೆ. ಮುಟ್ಟಾಗುವ ಒಂದು ವಾರಕ್ಕೆ ಮೊದಲು, ತಟ್ಟನೆ ಏರುವ ಎಸ್ಟ್ರೋಜನ್‌ನ ಮೊತ್ತ, ಸ್ತನದ ಜೀವಕೋಶಗಳು ಬಹುಸಂಖ್ಯೆಯಲ್ಲಿ ವೃದ್ಧಿಸುವಂತೆ ಮಾಡುತ್ತದೆ. ಇಂತಹ ಸಮಯದಲ್ಲಿ ಏನಾದರೂ ಹೆಚ್ಚುಕಮ್ಮಿಯಾಗಿ, ಜನಿಸಿದ ಹೊಸ ಜೀವಕೋಶಗಳು ವಿಕೃತಿಗೊಳ್ಳುವ ಸಾಧ್ಯತೆ ಇದೆ. ಈ ವಿಕೃತಿಗೊಂಡ ಜೀವಕೋಶಗಳು, ನಂತರದ ಪ್ರತಿ ಬಾರಿಯ 'ಎಸ್ಟ್ರೋಜೆನ್' ಹೆಚ್ಚುವ ಸಮಯದಲ್ಲಿ ವೃದ್ಧಿಸಿ, ಕ್ಯಾನ್ಸರಿನ ಗಡ್ಡೆಗೆ ಕಾರಣವಾಗುತ್ತವೆ. ಸ್ತನದ ಕ್ಯಾನ್ಸರಿಗೆ ಎಸ್ಟ್ರೋಜೆನ್ ಒಂದೇಕಾರಣವಲ್ಲ, ನಾವು ತೆಗೆದುಕೊಳ್ಳುವ ಆಹಾರ ಪಾನೀಯ ಎಲ್ಲವೂ ಕಾರಣವಾಗಬಲ್ಲವು. ವಾರದಲ್ಲಿ ಮೂರು ಬಾರಿಗೂ ಹೆಚ್ಚು ಕುಡಿವ ಮದ್ಯ, 'ಜಂಕ್ ಪುಡ್'ನಲ್ಲಿರುವ ಫ್ಯಾಟಿ ಆಸಿಡ್ಸ್, ದೈಹಿಕ ವ್ಯಾಯಾಮವಿಲ್ಲದ, ಶ್ರಮವಿಲ್ಲದ ಬದುಕು, ವಿಪರೀತವಾಗಿ ಕುಡಿಯುವ ಕಾಫಿ, ಸಿಗರೇಟು ಸೇದುವುದು ಇವೆಲ್ಲವೂ ಸ್ತನದ ಕ್ಯಾನ್ಸರಿನ ಅಪಾಯವನ್ನು ಹೆಚ್ಚಿಸುತ್ತವೆ. ಇವೆಲ್ಲಕ್ಕಿಂತ ಹೆಚ್ಚಾಗಿ ನಿಮ್ಮ ನೇರ ಸಂಬಂಧಿಗಳಲ್ಲಿ, ಅಂದರೆ ನಿಮ್ಮ ತಾಯಿ, ಅಕ್ಕ ತಂಗಿ, ದೊಡ್ಡಮ್ಮ, ಚಿಕ್ಕಮ್ಮ ಇವರಲ್ಲಿ ಮೂರು ಅಥವಾ ಹೆಚ್ಚು ಮಂದಿಗೆ ಸ್ತನದ ಕ್ಯಾನ್ಸರ್ ತಗುಲಿತ್ತೆಂದರೆ, ನಿಮಗೆ ಸ್ತನದ ಕ್ಯಾನ್ಸರ್ ಬರುವ ಸಂಭವ ಬಹಳಷ್ಟು ಹೆಚ್ಚಿದೆ. ಸ್ತನದ ಕ್ಯಾನ್ಸರಿಗೆ ಇಷ್ಟೆಲ್ಲ ಕಾರಣಗಳಿರುವಾಗ, 'ಸ್ತ್ರೀ ವಿಮೋಚನೆ'ಯನ್ನೇಕೆ ಬೊಟ್ಟು ಮಾಡುತ್ತಾರೆಂದು ಅರ್ಥವಾಗುವುದಿಲ್ಲ.

ನಿಜ ಹೆಣ್ಣು ತಡವಾಗಿ ಮದುವೆಯಾಗುವುದು, ಕಡಿಮೆ ಮಕ್ಕಳನ್ನು ಹೆರುವುದು, ತಡವಾಗಿ ಹೆರುವುದು, ಕೆಲವು ತಿಂಗಳ ಎದೆ ಹಾಲು ಕುಡಿಸಿ ಕೆಲಸಕ್ಕೆ ಹಿಂತಿರುಗುವುದು, ಇವೆಲ್ಲವೂ ಸ್ತನದ ಕ್ಯಾನ್ಸರಿಗೆ ಕಾರಣ ಇರಬಹುದು. ಆದರೆ ಈ ಸಮಸ್ಯೆಗೆ ಉತ್ತರ, 'ಬೇಗ ಹೆಣ್ಣು ಮಕ್ಕಳಿಗೆ ಮದುವೆ ಮಾಡಿ, ಹೇರಳವಾಗಿ ಹೆರಲು ಹೇಳಿ, ಮಕ್ಕಳಾದೊಡನೆ ಕೆಲಸ ಬಿಟ್ಟು ಕೂರುವುದಂತೂ' ಅಲ್ಲವಲ್ಲ. ಇವೆಲ್ಲ ನಿಜಕ್ಕೂ ಆತಂಕಕಾರಿ ಅಂಕಿ

ಸಂಖ್ಯೆಗಳಾದರೂ, ತಟ್ಟನೆ ತೀರ್ಮಾನಗಳಿಗೆ ಜಿಗಿದು, 'ಇಂದು ಪಟ್ಟಣ ಪ್ರದೇಶದಲ್ಲಿ ಹೆಣ್ಣು ಮಕ್ಕಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕ್ಯಾನ್ಸರ್ ಕಾಣಿಸಿಕೊಳ್ಳಲು- ಕಾರಣ ಮಹಿಳಾ ವಿಮೋಚನೆ, ಮಹಿಳೆಯರ ಪ್ರಗತಿ' ಎಂದು ಸಾರುವುದು ಕೇವಲ ಹಾಸ್ಯಾಸ್ಪದವಲ್ಲ, ಬಲು ಅಪಾಯಕಾರಿ. ಇಂಥ ಲೇಖನ ಓದಿದ ನಮ್ಮ ಸ್ನೇಹಿತರೊಬ್ಬರು 'ಈ ಮಿಕ್ಸಿ, ವಾಷಿಂಗ್ ಮಷೀನ್ ಎಲ್ಲ ಬಂದು ಹೆಂಗಸರಿಗೆ ಕೆಲಸವೇ ಇಲ್ಲವಾಗಿದೆ, ಅದಕ್ಕೆ ನೋಡಿ ಈ ವಿಪರೀತಗಳು' ಎಂದು ತೀರ್ಪು ಕೊಟ್ಟು ಬಿಟ್ಟರು.

ಕಾಫಿ ಕುಡಿಯುವುದು, ಪೆಪ್ಸಿ ಹೀರುವುದು, ಸದಾ ಒತ್ತಡದ ಬದುಕಿನಲ್ಲಿ ಹಣದ ಹಿಂದೆ ಅತಿ ವೇಗದಲ್ಲಿ ಓಡುವುದು, ಪಬ್, ಪಾರ್ಟಿ, ಹೆಂಡ, ಜಂಕ್ ಫುಡ್ ಇವೆಲ್ಲ ಮಹಿಳಾ ಪ್ರಗತಿಯ ಪ್ರತಿಫಲವಲ್ಲ. ಉದಾರೀಕರಣ, ಬಹು ರಾಷ್ಟ್ರೀಯ ಕಂಪನಿಗಳು, ಹೇರಳ ಹಣದ ಸಾಧ್ಯತೆ, ಅಗತ್ಯಗಳಿಗಿಂತ ಆಮಿಷಗಳತ್ತ ಒತ್ತು ಕೊಡುವ ಮಾಧ್ಯಮಗಳು, ಇವೆಲ್ಲವೂ ಇಂದು ತಟ್ಟನೆ ಬದಲಾಗಿರುವ ಮಹಿಳೆಯರ ಮತ್ತು ಪುರುಷರ ಬದುಕಿಗೆ ಕಾರಣ. ನಿಮ್ಮ ನೆಚ್ಚಿನ ಸಿನೆಮಾ ತಾರೆಯರು, ಕ್ರಿಕೆಟ್ ಆಟಗಾರರು ಕೋಟಿ ಬಾಚಿಕೊಂಡು 'ನಿಮ್ಮ ಒಡಲಿಗೆ ವಿಷ ಸುರಿದುಕೊಳ್ಳಿ' ಎಂದು ಹತ್ತತ್ತು ನಿಮಿಷಕ್ಕೊಮ್ಮೆ ದೂರದರ್ಶನದಲ್ಲಿ ಸಾರಿದರೆ, ಪೆಪ್ಸಿ, ಕೋಲಾ ಕುಡಿಯದವರುಂಟೆ? ಇವುಗಳ ಎದುರಿಗೆ ಎಳನೀರು, ಕಬ್ಬಿನ ರಸ, ಹಣ್ಣಿನ ರಸ, ಮಜ್ಜಿಗೆ ಆಕರ್ಷಕವಾಗಿ ಕಾಣುವುದೆ? ಇವೆಲ್ಲವೂ ಬದಲಾಗಿರುವ ನಮ್ಮ ಜೀವನ ಶೈಲಿ, ಬದಲಾಗಿರುವ ಆದ್ಯತೆಗಳು, ಸರಳ ಬದುಕಿನಿಂದ ದೂರವಾಗುತ್ತ, ಕೊಳ್ಳುಬಾಕ ಸಂಸ್ಕೃತಿಗೆ ತೆಕ್ಕೆ ಬಿದ್ದ ಜೀವನದ ಫಲವೇ ಹೊರತು, ಮಹಿಳಾ ಪ್ರಗತಿಯ ಫಲವಲ್ಲ. ಇಂತಹ ಕ್ಯಾನ್ಸರಿನಿಂದ ಪಾರಾಗುವುದು ಕೂಡಾ, ಜಾಗ್ರತಗೊಂಡ ಪ್ರಗತಿಶೀಲ ಮಹಿಳೆಯರಿಂದ ಸಾಧ್ಯವೆ ಹೊರತು, ಅಜ್ಞಾನ, ಅನಕ್ಷರತೆಯ ಸರಪಳಿಯಲ್ಲಿ ಬಂಧಿತ ಮಹಿಳೆಯರಿಂದಲ್ಲ.

ಪ್ರಗತಿ ಕಾಣದ ಮಹಿಳೆ, ಬೇಗ ವಿವಾಹವಾಗಿ, ಆದಷ್ಟು ಬೇಗ ಧಂಡಿಯಾಗಿ ಹೆತ್ತು, ದುಡಿಯದೆ ಮನೆಯಲ್ಲಿದ್ದು, ಬಹುಕಾಲ ಹಾಲು ಕುಡಿಸಿ ಸ್ತನದ ಕ್ಯಾನ್ಸರಿನಿಂದ ತಪ್ಪಿಸಿಕೊಳ್ಳಬಹುದೇನೋ, ಆದರೆ ಚಿಕ್ಕ ವಯಸ್ಸಿಗೆ ವಿವಾಹ, ಏರುವ ಜನಸಂಖ್ಯೆ, ಆರ್ಥಿಕ ಸ್ವಾವಲಂಬನೆಯಿಲ್ಲದೆ ಶೋಷಿತಗಳಾಗುವ ಮಹಿಳೆ, ಅದರ ಸಾಮಾಜಿಕ ಪರಿಣಾಮಗಳು, ಇವೆಲ್ಲವನ್ನೂ ಕೂಡಿ ಗುಣಿಸಿದರೆ ತಮ್ಮ ಸ್ತನಕ್ಕಷ್ಟೇ ಸೀಮಿತವಾದ ಕ್ಯಾನ್ಸರೇ ವಾಸಿ ಎನ್ನಬಹುದು. ಇವೆಲ್ಲಕ್ಕೂ ಪರಿಹಾರ ಮಹಿಳಾ ಜಾಗೃತಿ ಮಾತ್ರ.

ಹೆಣ್ಣು ಆರ್ಥಿಕವಾಗಿ ಸಂಪೂರ್ಣ ತನ್ನವರ ಮೇಲೆ ಅವಲಂಬಿಸಿದ ಕಾಲವಿತ್ತು. ಕೆಲಸ ಹಿಡಿದರೂ, ಮದುವೆಯಾದೊಡನೆ ನಿಲ್ಲಿಸುವ ಕಡ್ಡಾಯವಿತ್ತು. ಮಗು ಆದ ಮೇಲಂತೂ ದುಡಿಮೆ ಅಸಂಭವವಿತ್ತು. ಎಲ್ಲವೂ ಸುಗಮವಾಗಿ ಸಾಗಿದಾಗ ಚಿಂತೆ ಇರಲಿಲ್ಲ. ಆದರೆ ಬದುಕು ಒಂದಿಷ್ಟು ಹಳಿಯಿಂದ ಹೊರಳಿದರೂ ದುರ್ಭರವಾಗುತ್ತಿತ್ತು. ವೈಧವ್ಯ, ವಿಚ್ಛೇದನೆ, ಬದುಕಿನ ಇಂತಹ ಯಾವುದೇ ಅನಿಶ್ಚಿತ ಸ್ಥಿತಿಯಲ್ಲಿ ತತ್ತರಿಸದೆ ದೃಢವಾಗಿ ನಿಲ್ಲಲು ಮಹಿಳೆಗ ಆರ್ಥಿಕ ಸ್ವಾವಲಂಬನೆ ಅತಿ ಮುಖ್ಯವಾದದ್ದು. ಹಾಗೆಂದೇ ದುಡಿವ ಮಹಿಳೆಯರ ಸಂಖ್ಯೆ ಹೆಚ್ಚಿತು. ತಾನು ಹೊಕ್ಕ ಉದ್ಯೋಗ ರಂಗದಲ್ಲಿ ತನ್ನನ್ನು ತಾನು ಸಾಬೀತು ಮಾಡುವ ಅಗತ್ಯದಲ್ಲಿ ಮಹಿಳೆಯರು ತಡವಾಗಿ ಮದುವೆಯಾಗುವುದು, ತಡವಾಗಿ ಮಕ್ಕಳನ್ನು ಮಾಡಿಕೊಳ್ಳುವುದು ಸಾಮಾನ್ಯವಾಯಿತು. ತಾವು ಹೊಕ್ಕ 'ಪುರುಷ ಪ್ರಧಾನ' ದುಡಿಮೆಯ ಕ್ಷೇತ್ರದಲ್ಲಿ 'ಮಗುವಿಗೆ ಜ್ವರ' ಎಂದು ರಜೆ ಹಾಕಿದರೆ, 'ಈ ಹೆಂಗಸರಿಗೆ ಕೆಲಸ ಕೊಟ್ಟರೆ ಹೀಗೆ ನೋಡಿ' ಎಂಬ ಟೀಕೆ ಕೇಳಿ ಬರುತ್ತಿತ್ತು. ಮನೆ-ಮಕ್ಕಳ ಜವಾಬ್ದಾರಿಯನ್ನು ಗಂಡು ಹಂಚಿಕೊಳ್ಳುತ್ತಿರಲಿಲ್ಲ, ಅವನ್ನು ಕೌಟುಂಬಿಕ ಹಾಗೂ ಸಾಮಾಜಿಕ ಅಗತ್ಯಗಳಾಗಿ ಕೆಲಸ ಕೊಟ್ಟವರೂ ಸಹೃದಯತೆಯಿಂದ ಕಾಣುತ್ತಿರಲಿಲ್ಲ. ಗಂಡಿಗೆ ತನ್ನ ಉದ್ಯೋಗದಲ್ಲಿ ಮುಂದುವರೆಯಲು ಸಿಗುವ ಪತ್ನಿ ಮತ್ತು ಕುಟುಂಬ ವರ್ಗದ ಬೆಂಬಲ, ಹೆಣ್ಣಿಗೆ ಈಗಲೂ ಇಲ್ಲ. 'ಅಡಿಗೆ ಮಾಡದೆ ಕಛೇರಿಗೆ ಹೋದನೆಂದೋ, ಮಗುವಿಗಾಗಿ ರಜೆ ಹಾಕಲಿಲ್ಲವೆಂದೋ' ಕುಟುಂಬವಾಗಲಿ, ಸಮಾಜವಾಗಲಿ ಗಂಡನ್ನು ದೂರುವುದಿಲ್ಲ. ಆದರೆ ಮನೆಯ ಹೊರಗೆ ಗಂಡಿಗೆ ಸಮಾನವಾಗಿ ದುಡಿದು, ಮನೆಯ ಒಳಗೆ ಏಕಾಂಗಿಯಾಗಿ ದುಡಿವ ಹೆಣ್ಣಿನ ಸ್ಥಿತಿ ಬೇರೆಯೇ ಇತ್ತು ಮತ್ತು ಈಗಲೂ ಇದೆ. ಇಂತಹ ಸಾಮಾಜಿಕ ಸ್ಥಿತಿಯಲ್ಲಿ ಬಹಳಷ್ಟು ಓದಿದ ಉದ್ಯೋಗಸ್ಥ ಮಹಿಳೆಯರು 'ವಿವಾಹವನ್ನು ಮುಂದೂಡಿದ, ನಿರಾಕರಿಸಿದ ಒಂದು ಹಂತ'ವನ್ನು ಮಹಿಳೆಯರು ಹಾದು ಬಂದಿದ್ದಾರೆ. ಇತ್ತೀಚೆಗೆ ನಾನು ಕೆಲವು ಹಿರಿಯ ಹಾಗೂ ಕಿರಿಯ ಮಹಿಳಾ ವಿಜ್ಞಾನಿಗಳನ್ನು ಸಂದರ್ಶಿಸಿದ್ದೆ. ಹಿರಿಯ ವಿಜ್ಞಾನಿಗಳಲ್ಲಿ ಬಹುತೇಕ ಮಹಿಳೆಯರು ಅವಿವಾಹಿತರಾಗಿದ್ದರು. 'ವಿವಾಹ ತಮ್ಮ ಸಂಶೋಧನೆಯ ಬದುಕಿಗೆ ಅಡ್ಡಿಯಾಗುತ್ತದೆ' ಎಂಬುದು ಅವರ ಅಭಿಪ್ರಾಯವಾಗಿತ್ತು. ಆದರೆ ಬಹಳಷ್ಟು ಕಿರಿಯ

ಮಹಿಳೆಯರು ವಿವಾಹವಾಗಿದ್ದರು, ಪತಿಯ ಮತ್ತು ಕುಟುಂಬದ ಸಹಕಾರವನ್ನು ನೆನೆದರು. ಬದುಕನ್ನು ಹಗುರವಾಗಿಸಿರುವ ಗೃಹೋಪಕರಣಗಳು, ಒದಗಿ ಬರುವ 'ಬೇಬಿ ಸಿಟ್ಟಿಂಗ್' ವ್ಯವಸ್ಥೆಯನ್ನು ನೆನೆದರು. ಇವರು ಕುಟುಂಬ ಮತ್ತು ಉದ್ಯೋಗ ಎರಡರಲ್ಲೂ ಯಶಸ್ವಿಯಾದವರು.

ಇಂದು ಎದುರಾಗಿರುವ ಸಮಸ್ಯೆಗಳಿಗೆ ಉತ್ತರ, ನಮ್ಮ ಸಮಾಜ ದುಡಿವ ಮಹಿಳೆಗೆ ಬೆಂಬಲ, ಸಹಕಾರ ನೀಡುವಲ್ಲಿದೆ. ಇಂದು 'ಫ್ಯಾಮಿಲಿ ಫ್ರೆಂಡ್ಲಿ' ಕಂಪನಿಗಳು ಕೇಳಿ ಬರುತ್ತಿವೆ. ತಮ್ಮ ನೌಕರರಿಗೆ ಹೆಚ್ಚು ಸೌಕರ್ಯಗಳನ್ನು ಒದಗಿಸಿ ಕೊಡುವತ್ತಲು ಒಂದಿಷ್ಟು ಗಮನ ಹರಿದಿದೆ. ನಮ್ಮ ದುಡಿಮೆಯ ತಾಣಗಳು, ಮಕ್ಕಳನ್ನು ಬಿಡಲು ಉತ್ತಮ ಕ್ರೆಷ್ ವ್ಯವಸ್ಥೆ ನೀಡಿ, ಕೌಟುಂಬಿಕ ಬದುಕಿಗೆ ಪೂರಕವಾಗಿರಬೇಕು. ಇಂದು ಅನೇಕ ಸಾರ್ವಜನಿಕ ಕಂಪನಿಗಳಲ್ಲಿ ತಾಯಿಯಾದ ಮಹಿಳೆಗೆ ಬೆಳಗ್ಗೆ ಕ್ರೆಷ್‌ನಲ್ಲಿ ಮಗುವನ್ನು ಬಿಡಲು, ಹದಿನೈದು ನಿಮಿಷ ತಡವಾಗಿ ಬರಬಹುದಾದ ಅನುಮತಿ ನೀಡುತ್ತಾರೆ. ಮಧ್ಯಾಹ್ನ ಹಾಲೂಡಲು ಹೋಗಬಹುದು, ಹಿಂತಿರುಗುವಾಗ ಹದಿನೈದು ನಿಮಿಷ ಮುಂಚಿತ ಹೋಗುವ ಅವಕಾಶವೂ ಇದೆ. ಸಮಾಜ, ಮತ್ತು ಸಂಸಾರದ ಬೆಂಬಲ ಸಹಕಾರಗಳಿಂದ ಮಾತ್ರ ಆರೋಗ್ಯಪೂರ್ಣ ಭವಿಷ್ಯ ಸಾಧ್ಯ. ಇದು ಕೇವಲ ಹೆಣ್ಣಿನ ಆರೋಗ್ಯದ ಪ್ರಶ್ನೆಯಲ್ಲ, ನಮ್ಮ ಸಮಾಜದ ಆರೋಗ್ಯದ ಪ್ರಶ್ನೆ. ಹೆಣ್ಣಿಗೆ ಬಡಿವ ಕ್ಯಾನ್ಸರ್, ಕೇವಲ ಅಕೆಯೊಬ್ಬಳಿಗೆ ಬಡಿಯುವುದಿಲ್ಲ, ಇಡೀ ಕುಟುಂಬಕ್ಕೇ ಗರ ಬಡಿಯುತ್ತದೆ. ಪುರುಷನಿಗೆ ಸಿಗುವಂತಹ ಸಹಕಾರ ಸಿಕ್ಕರೆ ಮಹಿಳೆಯರು ಮದುವೆ ಅಥವಾ ಮಕ್ಕಳನ್ನು ಮುಂದೂಡುವ ಅಗತ್ಯವೇ ಬೀಳದು. ಪ್ರತಿ ಹೆಣ್ಣು ಮತ್ತು ಗಂಡು, ಕುಟುಂಬ ಮತ್ತು ಉದ್ಯೋಗ ಎರಡಲ್ಲೂ ಯಶಸ್ಸನ್ನು, ನೆಮ್ಮದಿಯನ್ನು ಕಾಣಬಯಸುತ್ತಾರೆ. ದುಡಿವ ಮಹಿಳೆಗೆ ಪೂರಕವಾದ ಪರಿಸರ ನಿರ್ಮಾಣ ನಮ್ಮ ಗುರಿಯಾಗಬೇಕೆ ಹೊರತು 'ಮಹಿಳೆ ಪ್ರಗತಿಶೀಲಳಾದಷ್ಟೂ ಕ್ಯಾನ್ಸರಿಗೆ ಬಲಿಯಾಗುತ್ತಾಳೆ' ಎಂಬ ಹೇಳಿಕೆಗಳನ್ನು ನೀಡಿ ಹಾದಿ ತಪ್ಪಿಸ ಬಾರದು, ದಶಕ ದಶಕಗಳ ಸ್ತ್ರೀ ವಿಮೋಚನಾ ಹೋರಾಟದ ಫಲವನ್ನು ನಿರ್ಲಕ್ಷಿಸಬಾರದು.

ಅಂದಹಾಗೆ, ವಿಜ್ಞಾನಿಗಳಾದವರೂ ತಟ್ಟನೆ ಜಿಗಿಯುವ ಇಂತಹ ತುರ್ತು ತೀರ್ಮಾನಗಳನ್ನು ಕೇಳಿ, ಒಂದು ಕತೆ ನೆನಪಾಗುತ್ತಿದೆ. ಓರ್ವ ವಿಜ್ಞಾನಿಯಿದ್ದ; ಆತ ಒಂದು ಕಪ್ಪೆಯನ್ನು ಹಿಡಿದುಕೊಂಡು ಬಂದು ಅದಕ್ಕೆ 'ಜಂಪ್' ಎಂದ; ಕಪ್ಪೆ ಜಿಗಿಯಿತು. ಕಪ್ಪೆಯ ಕಾಲೊಂದನ್ನು ತುಂಡರಿಸಿ ಮತ್ತೆ 'ಜಂಪ್' ಎಂದ, ಕಪ್ಪೆ ಹೇಗೋ ಅಂತೂ ಈ ಬಾರಿಯೂ ಜಿಗಿಯಿತು. ಎರಡನೇ ಕಾಲು ಕತ್ತರಿಸಿ 'ಜಂಪ್' ಎಂದ, ಏಗಿಕೊಂಡೂ ಅಂತೂ ಕಪ್ಪೆ ಜಿಗಿಯಿತು. ಈ ಬಾರಿ ಮೂರನೆ ಕಾಲನ್ನೂ ಕತ್ತರಿಸಿ, 'ಜಂಪ್' ಎಂದ. ಕಷ್ಟಪಟ್ಟು ಇದ್ದೊಂದು ಕಾಲಿನಲ್ಲೇ ಜಿಗಿಯಿತು. ಇದೀಗ ವಿಜ್ಞಾನಿ ನಾಲ್ಕನೇ ಕಾಲನ್ನೂ ಕತ್ತರಿಸಿ 'ಜಂಪ್' ಎಂದ, ಕಪ್ಪೆ ಜಿಗಿಯಲೇ ಇಲ್ಲ. ಶಿಷ್ಯನನ್ನು ಕೇಳಿದ, ಈ ಪ್ರಯೋಗದಿಂದ ನಿನಗೇನು ತಿಳಿಯಿತು, ತಟ್ಟನೆ ಆತ ಹೇಳಿದ 'ಸಾರ್, ಕಪ್ಪೆಯ ನಾಲ್ಕೂ ಕಾಲನ್ನು ಕತ್ತರಿಸಿದಾಗ ಅದು ಕಿವುಡಾಗುತ್ತದೆ, ಕಪ್ಪೆಗೆ ನೀವು ಜಂಪ್ ಅಂದದ್ದು ಕೇಳಿಸಲೇ ಇಲ್ಲ' ಉತ್ತರಿಸಿದ ಮಹಾಶಯ! ಕ್ಯಾನ್ಸರ್ ಕುರಿತ ವೈದ್ಯರು, ವಿಜ್ಞಾನಿಗಳು ನಡೆಸಿರುವ ಪ್ರಯೋಗಗಳು, ಕಲೆ ಹಾಕಿದ ಅಂಕಿ ಸಂಖ್ಯೆಗಳೇನೋ ಸರಿ ಇರಬಹುದು, ಆದರೆ ಅವರು 'ಜಿಗಿದಿರುವ ನಿರ್ಣಯ' ಮಾತ್ರ ಈ ಶಿಷ್ಯೋತ್ತಮನ ಉತ್ತರದಂತೆಯೆ. ■

***ಅತಿವೇಗದಲ್ಲಿ ಇಳಿಯುತ್ತಿದೆ ಮಹಿಳೆಯ ಸಂಖ್ಯೆ...***

ಹೆಣ್ಣು ಮಕ್ಕಳು ಇಂದು ಡಾಕ್ಟರ್ ಆಗಿರಬಹುದು, ಇಂಜಿನಿಯರ್ ಆಗಿರಬಹುದು, ಹಿಮಾಲಯ ಏರಿರಬಹುದು, ವಿಮಾನ ಹಾರಿಸಿರಬಹುದು, ಆದರೂ ಭಾರತೀಯರಿಗೆ ಹೆಣ್ಣು ಮಗು ಬೇಡ. ಭ್ರೂಣ ಹತ್ಯೆ, ಶಿಶು ಹತ್ಯೆ ನಿರಾತಂಕವಾಗಿ ಮುಂದುವರೆದು ಇಂದು ಪ್ರತಿ ಸಾವಿರ ಗಂಡಸರಿಗೆ ಇರುವುದು, ಕೇವಲ 927 ಹೆಂಗಸರು. 1901ರಲ್ಲಿ ಹೆಂಗಸರ ಇದೇ ಸಂಖ್ಯೆ 972 ಇತ್ತು. 1931ರಲ್ಲಿ ಮಹಿಳೆಯರ ಸಂಖ್ಯೆ 850ಕ್ಕೆ ಇಳಿಯಿತು, ಇಳಿಯುತ್ತಲೇ ಬಂದು ಇಂದು 927ನ್ನು ತಲುಪಿದೆ. ಬೆಂಗಳೂರಿನಂಥಾ ನಗರದಲ್ಲೂ ಪ್ರತಿ ಸಾವಿರ ಗಂಡಸರಿಗೆ ಕೇವಲ 902 ಹೆಂಗಸರಿದ್ದಾರೆ. ಕಲಕತ್ತಾ ಇನ್ನೂ ಹಿಂದಿದೆ, ಅಲ್ಲಿ ಮಹಿಳೆಯರ ಈ ಸಂಖ್ಯೆ 830 ಮಾತ್ರ, ಮುಂಬಯಿಯಲ್ಲಿ 828, ಲೂಧಿಯಾನದಲ್ಲಂತೂ ಮಹಿಳೆಯರ ಸಂಖ್ಯೆ 795ಕ್ಕೆ ಇಳಿದು ಹೋಗಿದೆ.

ಇಂಥಾ ನಿರಾಶಾಯದಾಯಕ ಅಂಕಿಸಂಖ್ಯೆಗಳಿಗೆ ಇರುವ ಒಂದೇ ಒಂದು ಅಪವಾದ ಎಂದರೆ ಕೇರಳ. ಕೇರಳದಲ್ಲಿ ಪ್ರತಿ ಸಾವಿರ ಗಂಡಸರಿಗೆ, 1036 ಮಹಿಳೆಯರಿದ್ದಾರೆ! ಕೇರಳದ ಮಾತೃಪ್ರಧಾನ ಸಮಾಜ ಮತ್ತು ಸಂಸ್ಕೃತಿಯ ಹಿನ್ನೆಲೆ, ಇಲ್ಲಿ ಹೆಣ್ಣು ಮಗುವನ್ನು ಮುಕ್ತವಾಗಿ ಸ್ವಾಗತಿಸುತ್ತದೆ. ಇದೇ ರಾಜ್ಯ ಸಾಕ್ಷರತೆಯಲ್ಲಿ ಮುಂದಿರುವುದು ತಿಳಿದ ವಿಷಯ. ಇಲ್ಲಿ ಶೇಖಡಾ 87ರಷ್ಟು ಮಹಿಳೆಯರು ಸಾಕ್ಷರರು. ಅದೇ ರಾಜಸ್ಥಾನದಂತಹ ಪ್ರದೇಶದಲ್ಲಿ ಶಿಕ್ಷಿತ ಮಹಿಳೆಯರ ಸಂಖ್ಯೆ ಕೇವಲ ಶೇಖಡಾ 20 ಮಾತ್ರ!

# ರಾಮ್ ಸನೇಹಿಯ ಹೋರಾಟ

- ಪ್ರತಿಮ್ ರಂಜನ್ ಬೋಸ್

ರಾಮ್ ಸನೇಹಿ ಕೊನೆಗೂ ಸಂತುಷ್ಟನಾದರು ಬೇಡಿಯಾ ಜನಾಂಗದ 65ರ ಈ ವೃದ್ಧ ತನ್ನ ಜೀವಮಾನವನ್ನೆಲ್ಲ ಹೋರಾಟದಲ್ಲೇ ಕಳೆದರು. ಈ ಹೋರಾಟ ನಡೆಸಿದ್ದು ಬೇರ್‍ಯಾರ ಜೊತೆಗೂ ಅಲ್ಲ ತನ್ನ ಜಾತಿ ಬಾಂಧವರ ಜೊತೆಯೆ. ಈ ಹೋರಾಟ ನಡೆಸಿದ್ದು ಯಾವುದೇ ಹಣಕಾಸು ಆಸ್ತಿಗಾಗಿ ಅಲ್ಲ; ತನ್ನದೇ ಹೆಣ್ಣು ಮಕ್ಕಳನ್ನು ವೇಶ್ಯಾವೃತ್ತಿಗೆ ಇಳಿಸುವುದರ ವಿರುದ್ಧ. ವಾಸ್ತವದಲ್ಲಿ ಇದು ಅವನ ಕೋಮಿನವರೇ ಒಪ್ಪಕೊಂಡ ರೂಢಿಗತ ಪದ್ಧತಿಯಾಗಿತ್ತು. ಅಂತೂ 1991ರ ಜೂನ್ 24ರಂದು ಹೈಕೋರ್ಟ್ ರಾಮ್ ಸನೇಹಿ ಪರವಾಗಿಯೇ ತೀರ್ಪು ನೀಡಿ ಈ ಅನೈತಿಕ ದಂಧೆಯನ್ನು ಕಡೆಗಣಿಸಿದ ರಾಜ್ಯ ಸರ್ಕಾರಕ್ಕೆ ಛೀಮಾರಿ ಹಾಕಿತು. ಒಂಟಿಯಾಗಿ ನಡೆಸಿದ ಹೋರಾಟದಲ್ಲಿ ಜಯಗಳಿಸಿದ್ದಕ್ಕಾಗಿ ರಾಮ್ ಸನೇಹಿ ಸಂತಸಗೊಂಡರು.

ತನ್ನ ಮಕ್ಕಳನ್ನು ಮಾತ್ರವಲ್ಲ, ಬೇಡಿಯ ಜನಾಂಗದ ಎಲ್ಲ ಹೆಣ್ಣು ಮಕ್ಕಳನ್ನು ಕಾಪಾಡುವುದೇ ಸನೇಹಿಯ ಪ್ರಾಥಮಿಕ ಆದ್ಯತೆಯಾಗಿತ್ತು. ನ್ಯಾಯಾಲಯ ಸಹ ಈ ಸಮಸ್ಯೆಯನ್ನು ಇಡಿಯಾಗಿಯೇ ಪರಿಶೀಲಿಸಿತು. ನ್ಯಾಯಾಲಯದ ಆದೇಶದಿಂದ ಬಂಚಾಡ, ಕಂಜರ್, ಸನ್ನಸಿ ಹಾಗೂ ಬೇಡಿಯಾ ನಟ್ ಎಂಬ ಇತರ ಸೂಚಿತ ಜನಾಂಗಗಳ ಮಹಿಳೆಯರ ಜೀವನವು ಸುಧಾರಿಸುವ ಬಗ್ಗೆ ಆಶಾಭಾವನೆ ಮೂಡಿತು.

ಈ ವೇಶ್ಯಾ ಸಮಸ್ಯೆಗೆ ಹಲವು ಮುಖಗಳು. ಮೊತ್ತ ಮೊದಲನೆಯದಾಗಿ, ಶಾಜಾಪುರ್, ರಾಜ್‌ಗಡ್, ಗುನ, ಸಾಗರ್, ಶೇವ್‌ಪುರ್, ಮೊರೆನಾ, ಶಿವಪುರಿ ವಿದಿಶಾ ಮುಂತಾದ ಜಿಲ್ಲೆಗಳಲ್ಲಿ ಹುಡುಗಿಯರನ್ನು ಸರಬರಾಜು ಮಾಡುವ ಜಾಲ ಬಹಳ ವ್ಯಾಪಕವಾಗಿ ಹಬ್ಬಿದೆ. ಇಲ್ಲಿಂದ ರಾಜ್ಯದ ವೇಶ್ಯಾಗೃಹಗಳಿಗಲ್ಲದೆ ನೆರೆ ರಾಜ್ಯಗಳಾದ ಉತ್ತರ ಪ್ರದೇಶ (ಮುಖ್ಯವಾಗಿ ಮೀರತ್ ಮತ್ತು ಆಗ್ರಾ), ರಾಜಾಸ್ತಾನ ಹಾಗೂ ದೇಶದ ಇತರ ಭಾಗಗಳಿಗೂ ಹುಡುಗಿಯರನ್ನು ರವಾನಿಸುತ್ತಾರೆ. ಮೇಲೆ ಹೇಳಿದ ಜಿಲ್ಲೆಗಳಲ್ಲೂ ಸೇರಿದಂತೆ ಒಟ್ಟು 17000 ಬೇಡಿಯಾ ಹೆಣ್ಣು ಮಕ್ಕಳು ಈ ವೇಶ್ಯಾ ಜಾಲದಲ್ಲಿ ಸಿಲುಕಿಕೊಂಡಿದ್ದಾರೆ. ಸನೇಹಿಯವರ ಅಂದಾಜಿನ ಪ್ರಕಾರ ಮೊರೆನಾ ಜಿಲ್ಲೆಯ 185 ಕುಟುಂಬಗಳಿಂದ ಬಂದಂಥ 276 ಬೇಡಿಯ ಹೆಣ್ಣು ಮಕ್ಕಳು ಮುಂಬೈ ಹಾಗೂ ದೆಹಲಿಗಳಲ್ಲಿ ಮಾರಾಟವಾಗಿದ್ದಾರೆ. ಬೇಡಿಯಾ ಕೋಮಿನವರು ಜಾನಪದ ನೃತ್ಯ ಹಾಗೂ ಸಂಗೀತಗಳಲ್ಲಿ ಪರಿಣಿತರು ದೊಂಬರಾಟ ಮತ್ತು ಜಾದೂ ಮಂತ್ರಗಳಲ್ಲೂ ಎತ್ತಿದ ಕೈ. ಇವರ ನೆಲೆಯಲ್ಲಿಯೇ ಬಂಚಾಡ ಕೋಮಿನವರಿದ್ದಾರೆ. ಮನೆಯ ಮೊದಲ ಹೆಣ್ಣುಮಗಳನ್ನು ವೇಶ್ಯಾವೃತ್ತಿಗೆ ತಳ್ಳುವ ಪದ್ಧತಿ ಇವರಲ್ಲಿದೆ. ಈ ವಿಶಿಷ್ಟ ಪದ್ಧತಿಯನ್ನು ಬೇಡಿಯಾ ಜನರೂ ತಮ್ಮದಾಗಿಸಿಕೊಂಡರು. ಬ್ರಿಟಿಷರ ಆಡಳಿತದ ಅಂಕುಶಕ್ಕೆ ಸಿಲುಕಿಕೊಳ್ಳಲು ಇಚ್ಚಿಸದ ಬೇಡಿಯಾ ಜನ ಅಲೆಮಾರಿ ಜೀವನ ಶೈಲಿಯನ್ನೂ ರೂಪಿಸಿಕೊಂಡರು. ಜೊತೆಗೆ ವೇಶ್ಯಾ ಪದ್ಧತಿಯನ್ನು ಸಹಾ ಆತ್ಮರಕ್ಷಣೆಯ ತಂತ್ರದಂತೆ ರೂಢಿಸಿಕೊಂಡರು. ಬಂಚಾಡ ಜನರು ಸಮಾಜದಲ್ಲಿ ಕುಟುಂಬದ ಮಹತ್ವವನ್ನು ಸಹ ಗುರುತಿಸಿದ್ದರು. ಆದರೆ ಬೇಡಿಯಾ ಜನ ಹಾಗೆ ಮಾಡಲಿಲ್ಲ, ಬದಲಿಗೆ ಕುಟುಂಬವನ್ನು ಕಡೆಗಣಿಸಿ ವೇಶಾವೃತ್ತಿಯಲ್ಲಿಯೇ ಆಳವಾಗಿ ತೊಡಗಿಕೊಂಡರು. ಮೊದಲನೆಯ ಹೆಣ್ಣುಮಗಳನ್ನು ಮಾತ್ರವಲ್ಲ ಮನೆಯ ಪ್ರತಿಯೊಂದು ಹೆಣ್ಣು ಮಗಳನ್ನು ವೇಶ್ಯೆಯನ್ನಾಗಿ ಮಾಡಿದರು. ಇದೇ ಕಾರಣದಿಂದಾಗಿಯೇ ಈ ಕೋಮಿನವರಲ್ಲಿ ಮದುವೆಯೇ ನಡೆಯದಾಯಿತು. ಬೇಡಿಯಾ ಜನರಿಗೆ ಸಮಾಜದ ಪ್ರಮುಖ ವ್ಯಕ್ತಿಗಳೊಡನೆ ಭಾರಿ ನಂಟು. ಮೊರೆನಾ, ಶಿವಪುರ, ಬಿಂದ್, ಶೇವ್‌ಪುರ್, ಗುಣಾ ಹಾಗೂ ಚಂಬಲ್‌ನ ಸುತ್ತಮುತ್ತಲಲ್ಲಿ ವೇಶ್ಯಾವಾಟಿಕೆಗಳ ಚಟುವಟಿಕೆ ಹೆಚ್ಚಾಗಿರುವುದಕ್ಕೆ ಪ್ರಾಯಶಃ ಇದೂ ಒಂದು ಕಾರಣವೇ.

ಈ ಇಡೀ ಪ್ರಕರಣವನ್ನು ನೋಡಿಯೂ ನೋಡದಂತಿರುವುದೇ ಲೇಸು ಎಂದು ರಾಜ್ಯ ಆಡಳಿತಾಂಗ ಭಾವಿಸಿತ್ತು. 1971 ಹಾಗೂ 1986ರ ಮಧ್ಯದ ಸಮಯದಲ್ಲಿ ಗ್ವಾಲಿಯರ್‌ನ ಮಹಿಳೆಯರು ಅಲ್ಪಾವಧಿಯ ವಸತಿಗೃಹದಲ್ಲಿ (ನಿರಾಶ್ರಿತ ಮಹಿಳೆಯರ ಧಾಮ) 1631 ಮಂದಿ ಮಹಿಳೆಯರು ಹಾಗೂ 126 ಮಕ್ಕಳನ್ನು ಬಂಧನದಲ್ಲಿಡಲಾಗಿತ್ತು ಎಂದರೆ ಸರ್ಕಾರದ ನಿರ್ಲಕ್ಷ್ಯವನ್ನು ನೀವೇ ಊಹಿಸಿ. ಇವರ್‍ಯಾರೂ ಯಾವುದೇ ಪ್ರಕರಣದಲ್ಲಿ ಭಾಗಿಗಳಾದವರಲ್ಲ. ದೋಷಿ ಎಂದು ನಿರೂಪಿತರಾದವರಲ್ಲ. ಇವರು ಸುಮ್ಮನೆ ಅಡ್ಡಾಡುತ್ತಿದ್ದರೆಂಬುದೇ ಇವರ ದಸ್ತಗಿರಿಗೆ ಕಾರಣವಾಗಿತ್ತು. ಆದರೆ ವಾಸ್ತವದಲ್ಲಿ ಇವರೆಲ್ಲ ಲೈಂಗಿಕ ಶೋಷಣೆಗೆ ಒಳಗಾಗಿದ್ದವರೇ.

ಈ ಸಮಸ್ಯೆಗೆ ಪರಿಹಾರ ಒದಗಿಸುವ ದಿಕ್ಕಿನಲ್ಲಿ ಸರ್ಕಾರ ಎರಡು ಅಂಶಗಳ ಕ್ರಮ ಕೈಗೊಳ್ಳಬೇಕೆಂದು ನ್ಯಾಯಾಲಯ ಆದೇಶಿಸಿತು. ಮೊದಲನೆಯದಾಗಿ ಸಪ್ರೆಷನ್ ಆಫ್ ಇಮಾರಲ್ ಟ್ರಾಫಿಕ್ ಕಾಯಿದೆಯನ್ನು ಆಯಕಟ್ಟಿನ ಸ್ಥಳಗಳಲ್ಲಿ ಜಾರಿಗೊಳಿಸುವುದು ಹಾಗೂ ಇದಕ್ಕಾಗಿ ವಿಶೇಷ ಪೋಲೀಸ್ ಅಧಿಕಾರಿಗಳನ್ನು ನಿಯುಕ್ತಿಗೊಳಿಸುವುದು. ಇವೆಲ್ಲದರ ಗುರುತರ ಹೊಣೆಯನ್ನು ವರಿಷ್ಠ ಅಧಿಕಾರಿಯೊಬ್ಬರಿಗೆ ಒಪ್ಪಿಸಬೇಕು. ಎರಡನೆಯ ಅಂಶವೇನೆಂದರೆ ಬಂಚಾಡ ಮತ್ತು ಬೇಡಿಯಾ ಕೋಮಿನವರಿಗೆ ವೇಶ್ಯಾವೃತ್ತಿ ನಡೆಸಲು ಇರುವ ಸಾಮಾಜಿಕ ಪರವಾನಗಿಯನ್ನು ರದ್ದುಮಾಡಿ, ಈಗಾಗಲೆ ಈ ವೃತ್ತಿಯಲ್ಲಿರುವವರು ಮತ್ತೆ ಇದಕ್ಕೇ ಮರಳಿ ಬಾರದಿರುವಂತೆ ಪುನರ್ವಸತಿ ಸೌಲಭ್ಯ ಕಲ್ಪಿಸುವ ಯೋಜನೆಯನ್ನು ರಚಿಸುವುದು. ಆರಂಭದಲ್ಲಿ ಆಡಳಿತಾಂಗ ಈ ಬಗ್ಗೆ ಅತ್ಯಂತ ಚುರುಕಾಗಿ ಕಾರ್ಯಕ್ರಮ ಹಮ್ಮಿಕೊಂಡಿತು. ಆದರೂ ಮಧ್ಯಪ್ರದೇಶದ ಇನ್ಸ್‌ಪೆಕ್ಟರ್ ಜನರಲ್ (ತನಿಖೆ) ಆಗಿರುವ ಎಸ್.ಕೆ. ತ್ರಿಪಾಠಿಯವರೇ 1999ರ ಫೆಬ್ರವರಿಯಲ್ಲಿ ಒಪ್ಪಿಕೊಂಡಂತೆ ಈ

ಅನೈತಿಕ ಆಗುಹೋಗುಗಳ ಬಗ್ಗೆ ಜರುಗಿಸಲಾದ ಕ್ರಮಗಳು ಬಹಳ ಅಲ್ಪ; ಅಥವಾ 'ಶೂನ್ಯ' ಎಂದೂ ಹೇಳಬಹುದು. ಕೈಗೊಂಡ ಕ್ರಮಗಳೇನಿದ್ದರು ಕೇವಲ ಕಡತಗಳಿಗಷ್ಟೇ ಸೀಮಿತ. ಕಾರ್ಯರೂಪಕ್ಕೆ ಅವು ಯಾವುದೂ ಬರಲೇ ಇಲ್ಲ. ಹಾಗೂ ಸಾಮಾಜಿಕ ಸಮಸ್ಯೆಗಳ ಬಗ್ಗೆ ಕಳಕಳಿ ಇದ್ದ ಜಿಲ್ಲಾ ಕಲೆಕ್ಟರ್ ಒಬ್ಬರ ಸೇವಾವಧಿಯಲ್ಲಿ ಮಾತ್ರ ಒಂದೆರಡು ಬಂಧನಗಳಾದವು ಅಷ್ಟೆ.

1998ರ ಅಂತ್ಯದಲ್ಲಿ ಮಂಡ್‌ಸಾರ್‌ನ ಜಿಲ್ಲಾಧಿಕಾರಿ ಬಂಚಾಡ ಕೋಮಿನ ಸಮಸ್ಯೆಯನ್ನು ಕೈಗೆತ್ತಿಕೊಂಡರು. ಚೋದ್ಯದ ಸಂಗತಿಯೆಂದರೆ, ಅವರಿಗೇ ತಮಗಿರುವ ಹೆಚ್ಚುವರಿ ಅಧಿಕಾರದ ಕುರಿತು ಏನೂ ಅರಿವಿರಲಿಲ್ಲ. ಆದರೂ ಒತ್ತಡಕ್ಕೆ ಮಣಿದು 11 ಜನರನ್ನು ಬಂಧಿಸಿದರು. ಆದರೆ ಯಾವುದೇ ಸಾಕ್ಷ್ಯಾಧಾರಗಳಿಲ್ಲದೆ ನ್ಯಾಯಾಲಯ ಇವರನ್ನು ಬಿಡುಗಡೆ ಮಾಡಿತು. ಇದೇ ನಿಟ್ಟಿನಲ್ಲಿ ಮುಂದುವರಿದ ಜಿಲ್ಲಾಧಿಕಾರಿಗಳು ನಿವೃತ್ತ ಸೇವಾಧಿಕಾರಿ ಯೊಬ್ಬರನ್ನು ಈ ಕೆಲಸಗಳ ಉಸ್ತುವಾರಿಗೆ ನೇಮಿಸಿದರು. ಆಗಲೂ ಸಹ 60 ಮಂದಿ ವೇಶ್ಯೆಯರನ್ನು ಬಂಧಿಸಲಾಯಿತೇ ಹೊರತು ಈ ವ್ಯವಹಾರದಲ್ಲಿ ಭಾಗಿಗಳಾಗಿದ್ದ ಪುರುಷರ್‍ಯಾರೂ ಸಿಕ್ಕಿಹಾಕಿ ಕೊಳ್ಳಲಿಲ್ಲ.

ಬೇರೆ ಸ್ಥಳಗಳಿಗೆ ಹೋಲಿಸಿದರೆ ಮಂಡ್‌ಸಾರ್‌ನಲ್ಲಿ ಇಷ್ಟಾದರೂ ಕೆಲಸಗಳು ನಡೆಯುತ್ತಿರುವುದು ಸಮಾಧಾನದ ವಿಷಯವೆಂದೇ ಹೇಳಬೇಕು. ರಾಜ್‌ಗಡ್‌ನಿಂದ ಹುಡುಗಿಯರ ಸಾಗಣೆ ಆಗುತ್ತಿರುವುದು ಒಂದು ಮುಕ್ತ ರಹಸ್ಯ. ಇಲ್ಲಿಗೊಬ್ಬ ವಿಶೇಷ ಅಧಿಕಾರಿಯನ್ನು ನೇಮಕ ಮಾಡಬೇಕೆಂದು ಜಿಲ್ಲಾ ಆಡಳಿತಾಂಗ ಶಿಫಾರಸ್ಸು ಮಾಡಿತ್ತು. ಪಚೋರ್‌ನಲ್ಲಿರುವ ಡಾ. ಅಂಬೇಡ್ಕರ್ ಎಜುಕೇಶನ್ ಸೊಸೈಟಿ ಎಂಬ ಸಹಾಕರೇತರ ಸೇವಾಸಂಸ್ಥೆಯ ಅಧ್ಯಯನದ ಪ್ರಕಾರ 1945ರಲ್ಲಿ ಈ ಹಿಂದುಳಿದ ಜಿಲ್ಲೆಗೆ ಸೇರಿದ 48 ಹಳ್ಳಿಗಳಿಂದ ಬಂದ 380 ಹುಡುಗಿಯರು ವೇಶ್ಯಾವೃತ್ತಿಯ ಹಾದಿ ಹಿಡಿದರು. ನ್ಯಾಯಾಲಯದ ಆದೇಶದ ಮೊದಲನೆಯ ಅಂಶದ ಪಾಲನೆಯ ವೈಖರಿ ಹೀಗಾಯಿತು. ಎರಡನೆಯ ಅಂಶದ ಪಾಲನೆ ಸ್ವಲ್ಪ ಮೇಲು.

ಸಾಮಾಜಿಜ ಒಪ್ಪಿಗೆ ಇರುವ ವೇಶ್ಯಾವೃತ್ತಿಯನ್ನು ರದ್ದು ಪಡಿಸುವ 'ಜಾಬಳಿ ಯೋಜನೆ' 1992ರಲ್ಲಿ ರೂಪುಗೊಂಡಿತು. ನಾಲ್ಕು ಹಂತಗಳ 16 ಕೋಟಿ ರೂ ವೆಚ್ಚದ ಈ ಯೋಜನೆಗೆ ಸಾಕಷ್ಟು ಅಧ್ಯಯನ, ತಯಾರಿಯು ನಡೆದಿತ್ತು. ಜೊತೆಗೆ ಸೇವಾಸಂಸ್ಥೆಗಳ ಸಹಕಾರವೂ ಇತ್ತು. 6 ರಿಂದ 12 ವಯಸ್ಸಿನ ಮಕ್ಕಳನ್ನು ಮನೆಯಿಂದ ಬೇರ್ಪಡಿಸಿ ಅವರಿಗೆ ವಿಶೇಷ ವಸತಿ ಶಾಲೆಗಳಲ್ಲಿ ಪ್ರಾಥಮಿಕ ಶಿಕ್ಷಣ ಒದಗಿಸುವುದು; 12 ರಿಂದ 25 ವಯಸ್ಸಿನ ಹೆಣ್ಣು ಮಕ್ಕಳು ವೇಶ್ಯಾವೃತ್ತಿಗೆ ಹೋಗದಿರಲು ಅವರಿಗೆ ಇನ್ನೂ ಹೆಚ್ಚಿನ ಶಿಕ್ಷಣ ಹಾಗೂ ವೃತ್ತಿ ಶಿಕ್ಷಣ ಕೊಡುವುದು; ಇಷ್ಟೇ ಅಲ್ಲದೆ ಜನತೆಗೆ ಆರೋಗ್ಯ ಸಂರಕ್ಷಣೆ ಮತ್ತು ಏಡ್ಸ್ ಬಗ್ಗೆ ಅರಿವು ಮೂಡಿಸುವುದು ಇವೆಲ್ಲ ಈ ಯೋಜನೆಯ ಅಂಗಳಾಗಿದ್ದವು.

ರಾಮ್ ಸನೇಹಿ ಪಕ್ಕಾ ಆಶಾವಾದಿ. 40 ವರ್ಷಗಳಿಂದ ಹುಡುಗಿಯರನ್ನು ವೇಶ್ಯಾವಾಟಿಕೆಗಳಿಂದ ಕಾಪಾಡುವುದೇ ಆತನ ಕಾಯಕವಾಗಿತ್ತು. ಇದಕ್ಕಾಗಿ ತನ್ನ ಕೋಮಿನವರೊಡನೆ ಬೀದಿ ಬೀದಿಗಳಲ್ಲಿ ಜಗಳವಾಡುತ್ತಿದ್ದರು. ಮೊರೆವಾದಲ್ಲಿ ಅಭ್ಯುದಯ ಆಶ್ರಮವನ್ನು ಸ್ಥಾಪಿಸುವುದರ ಮೂಲಕ ಈಗ ಆತ ತನ್ನ ಹೋರಾಟಮಯ ಜೀವನದ ಎರಡನೆಯ ಘಟ್ಟವನ್ನು ಆರಂಭಿಸಿದರು. ಅಭ್ಯುದಯ ಆಶ್ರಯ ಭವಿಷ್ಯದ ಪೀಳಿಗೆಗಳಿಗೆ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣಗಳನ್ನು ಒದಗಿಸುವ ವಸತಿ ಶಾಲೆ. ವಾಸ್ತವದಲ್ಲಿ ಇದು ಜಾಬಳಿ ಯೋಜನೆಯ ಮೊದಲ ಹೆಜ್ಜೆ. ಸನೇಹಿಯೇ ಆರಂಭಿಸಿದ ಭಿಮುಕ್ತ ಜಾತಿ ಅಭ್ಯುದಯ ಸಂಘದ ವತಿಯಿಂದ ಆರಂಭವಾದ ಶಾಲೆ. ಆರಂಭದಲ್ಲಿ ಈ ಶಾಲೆಯಲ್ಲಿ 100 ಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರಿದ್ದರು. ಕ್ರಮೇಣ ಇದೇ ರೀತಿಯ ಶಾಲೆ ಸೇವಾ ಸಂಸ್ಥೆಗಳಿಂದ ವಿವಿಧ ಜಿಲ್ಲೆಗಳಲ್ಲಿ ಆರಂಭವಾದವು.

ಮೊದಲನೆಯ ಹಂತದವರೆಗೂ ಎಲ್ಲ ಸರಿಯಾಗಿಯೇ ಇತ್ತು. ಮಿಕ್ಕ ಮೂರು ಹಂತಗಳನ್ನು ಜಾರಿಗೊಳಿಸುವುದೇ ಅತ್ಯಂತ ಕಷ್ಟವಾಯಿತು. ಸರ್ಕಾರದ ವತಿಯಿಂದ ಪ್ರತಿ ವಿದ್ಯಾರ್ಥಿಗೆ ತಿಂಗಳಿಗೆ 250 ರೂ ಕೊಡಲಾಗುತ್ತದೆ. ಇದು ಯಾವ ಮೂಲೆಗೆ? ಸನೇಹಿಗೆ ಒದ್ದಾಟ. ಈತನ ಸಾಲದ ಹೊರೆ ಏರುತ್ತಲೇ ಇದೆ.

ಸರ್ಕಾರ ಶಾಲೆಗೆ ನಿಗದಿಪಡಿಸಿರುವ ಮಕ್ಕಳ ಸಂಖ್ಯೆ 150. ಆದರೆ ಸನೇಹಿಯ ಶಾಲೆಯಲ್ಲಿ 223 ಮಕ್ಕಳಿದ್ದಾರೆ. ಶಾಲೆ ದಿವಾಳಿಯೆದ್ದು ಹೋಗುತ್ತದೆ ಎಂಬ ಕಾರಣದಿಂದ ಅನೇಕ ಮಕ್ಕಳನ್ನು ವಾಪಸು ಕಳಿಸಿದೆವು. ಎಂದು ಸನೇಹಿ ಅತ್ಯಂತ ನೋವು ದುಃಖಗಳಿಂದ ಹೇಳುತ್ತಾರೆ. ಈ ವಯಸ್ಸಿನ ಹುಡುಗಿಯರನ್ನು ವಾಪಾಸು ಮನೆಗೆ ಕಳಿಸುವುದೆಂದರೆ ಷಾರ್ಕುಗಳ ಮಧ್ಯದಲ್ಲಿ ಅವರನ್ನು ಬಿಟ್ಟಂತೆಯೇ' ಎನ್ನುವ ಸನೇಹಿಯ ಧ್ವನಿಯಲ್ಲಿ ಅಸಹಾಯಕತೆಯ-ಹತಾಶೆಗಳು ಮೂಡಿವೆ.

ಜಾಬಳಿ ಯೋಜನೆಯಲ್ಲಿ ಆರಂಭಿಸಲಾದ ಶಾಲೆಗಳ ಪೈಕಿ ಅಭ್ಯುದಯ ಆಶ್ರಮವೂ ಸೇರಿದಂತೆ ಮೂರೋ ನಾಲ್ಕೋ ಶಾಲೆಗಳೂ ಕೆಲಸ ಮಾಡುತ್ತಿವೆ. ಮಂಡ್‌ಸಾರ್ ಪಟ್ಟಣದಲ್ಲಿ ಬಂಚಾಡದವರಿಗಾಗಿಯೇ ಮಹಿಳಾ ಮಂಡಲ್ ಸ್ಥಾಪಿಸಿದ ಶಾಲೆಯಂತೆ ಕೆಲವು ಶಾಲೆಗಳೂ ಇವೆ. ಆದರೆ ಅವುಗಳ ಉಪಯೋಗ ಬೇರೆ ರೀತಿಗಳಲ್ಲೇ ಆಗುತ್ತಿವೆ. ಈ ಶಾಲೆಯನ್ನು ಆರಂಭಿಸಿದ ಒಂದು ವರ್ಷದೊಳಗೇ ಮುಚ್ಚಲಾಯಿತು. ಈಗ ಆ ಕಟ್ಟಡದಲ್ಲಿ ಮದುವೆ ಮುಂತಾದ ಸಮಾರಂಭಗಳು ನಡೆಯುತ್ತವೆ.

ಸನೇಹಿ ಈಗ ಮತ್ತೆ ನ್ಯಾಯಾಲಯದ ಕಟಕಟೆ ಏರಿದ್ದಾರೆ - ನ್ಯಾಯಾಲಯದ ಆದೇಶ ಪಾಲಿಸದಿರುವ ಬಗ್ಗೆ ದೂರು ಹೊತ್ತು!

ಕನ್ನಡಕ್ಕೆ : ಹೆಚ್.ಎನ್. ಗೀತಾ

ಕೃಪೆ : ದಿ ಹಿಂದು

# ಹೆಣ್ಣು ಹೆಸರಿನ ಹೋರಾಟಗಾರ

ಮಹಿಳೆಯರಿಗೆ ಮಹತ್ವವಿಲ್ಲದ ಸಾಮಾಜಿಕ ಪರಿಸರದಲ್ಲಿ ಮಹಿಳೆಯರು ಪುರುಷರ ಹೆಸರಿಟ್ಟುಕೊಂಡು ಬರೆದದ್ದು, ಬದುಕಿದ್ದು ಕೇಳಿದ್ದಿರಿ. ಪುರುಷ, ಮಹಿಳೆಯ ಹೆಸರಿಟ್ಟುಕೊಂಡು ದುಡಿಯುವುದನ್ನು ನೋಡಿರುವಿರಾ? 42 ವರ್ಷದ ರತನ್ ಕಾತ್ಯಾಯಿನಿ ಅಂತಹ ಅಪರೂಪದ ವ್ಯಕ್ತಿ.

ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ರತನ್, ತನ್ನ ಬ್ರಾಹ್ಮಣ ಹೆಸರಾದ 'ಶರ್ಮಾ' ತೊರೆದು, 'ಕಾತ್ಯಾಯಿನಿ' ಎಂಬ ಜಾತಿ ಸೂಚಕವಲ್ಲದ, ಹೆಣ್ಣು ಹೆಸರನ್ನು ಜೋಡಿಸಿಕೊಂಡರು. 'ದುರ್ಗೆಯ ಅನೇಕ ಹೆಸರುಗಳಲ್ಲಿ ಕಾತ್ಯಾಯಿನಿ ಒಂದು' ಎನ್ನುತ್ತಾರೆ ಈತ. ಎಲ್.ಎಲ್.ಬಿ. ಓದಿ ನ್ಯಾಯವಾದಿಯಾಗಿ ದುಡಿಯುತ್ತಿದ್ದ ಕಾತ್ಯಾಯಿನಿ, ಬಂಜಾರ ಜನರ ಬದುಕನ್ನು ನೆಲೆಗೊಳಿಸಲು ತಮ್ಮ ಉದ್ಯೋಗವನ್ನೂ ತೊರೆದರು, ಹೋರಾಟಕ್ಕಿಳಿದರು.

ರಸ್ತೆ ಬದಿಯಲ್ಲಿ ಬೀಡುಬಿಟ್ಟ ಬಂಜಾರ ಗುಂಪನ್ನು ಅದೆಷ್ಟು ಬಾರಿ ನೋಡಿದ್ದೇವೆ. ಒಂದು ಕ್ಷಣ ನಿಂತು, ಅವರು ಈ ಬೀದಿಬದಿಯಲ್ಲಿ ಹೇಗೆ ಬದುಕುತ್ತಿದ್ದಾರೆ ಎಂದು ಯೋಚಿಸಿರಲಿಕ್ಕಿಲ್ಲ. ಈ ಮಹಿಳೆಯರಿಗೆ ರಕ್ಷಣೆ ಎಲ್ಲಿ, ಮನೆಯಲ್ಲಿ ಇರುವ ಮಹಿಳೆಯರಿಗೇ ಆತಂಕಗಳಿರುವಾವ, ಬೀದಿಬದಿಯ ಈ ಮಹಿಳೆಯರ ಬದುಕು ಹೇಗಿರಬಹುದು? ಇಂದು ಈ ಊರು, ನಾಳೆ ಇಲ್ಲಿಂದ ಎತ್ತಂಗಡಿ ಎಂದು ಸಾಗುವ ಇವರ ಅಲೆಮಾರಿ 'ಬಂಜಾರ ಬದುಕು' ರಮ್ಯ ಕಲ್ಪನೆಯ ಕವಿಯ ಕಾವ್ಯದ ವಸ್ತುವಾಗದಿರಬಹುದು, ವಾಸ್ತವದಲ್ಲಿ ಇದು ಅಪ್ಪಟ ನೋವಿನ ಕತೆ.

ನಿಲ್ಲಲು ನೆಲೆ ಇಲ್ಲದ ಈ ಜನ ಸದಾ ಬದುಕನ್ನು ಬೆನ್ನಲ್ಲಿ ಹೊತ್ತು ತಿರುಗುತ್ತಾರೆ. ಬಣ್ಣ ಬಣ್ಣದ ತುಂಡು ಬಟ್ಟೆಗಳ ಅವರ ವರ್ಣರಂಜಿತ ಉಡುಪಿನ ಒಳಗೆ ದಟ್ಟ ದಾರಿದ್ರ್ಯದ ಪುರಾವೆಯೂ ಇಲ್ಲ. ವಿಳಾಸವಿಲ್ಲದ ಈ ಜನಕ್ಕೆ ರೇಷನ್ ಕಾರ್ಡ್ ಸಿಗದು, ಮತ ನೀಡುವ ಹಕ್ಕೂ ದೊರಕದು. ಇವರು ಭಾರತದ ಅದೃಶ್ಯ ಪ್ರಜೆಗಳು. ದೇಶದ ಅಭಿವೃದ್ಧಿ, ಪ್ರಗತಿ, ಎಲ್ಲವೂ ಉಳ್ಳವರ ಹೆದ್ದಾರಿಗಳಲ್ಲಿ ಸಾಗಿ, ಬೀದಿ ಬದುವಿನ ಇವರ ಬದುಕನ್ನು ಮುಟ್ಟದೇ ಹೋಗಿದೆ.

ಬಂಜಾರ ಹೆಣ್ಣು ಮಕ್ಕಳು ಉಪ್ಪು ಮತ್ತು 'ಮುಲ್ತಾನಿ ಮಿಟ್ಟಿ' ಅಂದರೆ ಮೈತೊಳೆದುಕೊಳ್ಳುವ ಚವುಳು ಮಣ್ಣನ್ನು ಮಾರಿ ಬದುಕುತ್ತಿದ್ದರು. ಇಂದು ಬಗೆ ಬಗೆಯ ಸೋಪುಗಳಿರುವ ಕಾಲದಲ್ಲಿ ಇವರ ಮಣ್ಣನ್ನು ಕೊಳ್ಳುವವರಾರು? ಕೆಲವು ಬಂಜಾರ ಪಂಗಡಗಳು ದೊಂಬರಾಟ ತೋರಿಸಿ ಬದುಕುತ್ತಿದ್ದವು. ಸಿನೆಮಾ, ದೂರದರ್ಶನದ ಕಾಲದಲ್ಲಿ ಅವರನ್ನು ನೋಡುವವರಾರು? ಬದುಕುವ ಮಾರ್ಗಗಳು ಕಳೆದು ಹೋದದ್ದು, ಬಂಜಾರ ಮಹಿಳೆಯರನ್ನು ವೇಶ್ಯಾವಾಟಿಕೆಗೆ ನೂಕುತ್ತಿದೆ. ಬದುಕಲು ಪರ್ಯಾಯಗಳನ್ನು ನೀಡದೆ ಇದನ್ನು ಅವರು ನಿಲ್ಲಿಸುವುದ್ಹೇಗೆ? 'ಏಡ್ಸ್' ಭಯದ ಈ ದಿನಗಳಲ್ಲಿ ಎಳೆಯ ಹೆಣ್ಣು ಮಕ್ಕಳಿಗೆ ಎಲ್ಲಿಲ್ಲದ ಬೇಡಿಕೆ ಏರಿ, ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿದೆ.

ಇಂತಹ ಪೀಡಿತ ಸಮುದಾಯಕ್ಕೆ ನೆಲೆ ಕಾಣಿಸುವತ್ತ ಎಲ್ಲಿಲ್ಲದಂತೆ ದುಡಿಯುತ್ತಿರುವ ವ್ಯಕ್ತಿ ಕಾತ್ಯಾಯಿನಿ. ಕಾತ್ಯಾಯಿನಿ ಈ ಮಹಿಳೆಯರಿಗೆ ಆತ್ಮವಿಶ್ವಾಸ ತಂದಿದ್ದಾರೆ. ತಮ್ಮ ಹಕ್ಕುಗಳ ಬಗ್ಗೆ ತಿಳಿಸುತ್ತಾ, ಹೋರಾಟವನ್ನು ಕಲಿಸಿದ್ದಾರೆ. ಬಂಜಾರ ಮಹಿಳೆ ನಸಿಯಾ 'ನಾವು ಎಷ್ಟು ಪುಕ್ಕಲಿದ್ದವು ಮತ್ತು ಅಜ್ಞಾನಿಗಳಾಗಿದ್ದವು ಎಂದರೆ, ಯಾರು ಬೇಕಾದರು ನಮ್ಮ ಕೆನ್ನೆಗೆ ಬಾರಿಸಿ ಹೋಗಬಹುದಿತ್ತು. ಇಂದು 'ವಕೀಲ್ ಸಾಹೇಬ'ರಿಂದಾಗಿ, ಯಾರಾದರೂ ನಮ್ಮೊಡನೆ ಕೆಟ್ಟದಾಗಿ ನಡೆದುಕೊಂಡರೆ, ಅವ ಪೋಲೀಸವನೇ ಆಗಲಿ, ಕಪಾಳಕ್ಕೆ ಕೊಡುವಷ್ಟು ಧೈರ್ಯ ಬಂದಿದೆ ನಮಗೆ' ಎನ್ನುತ್ತಾರೆ.

ವಕೀಲ ವೃತ್ತಿಯನ್ನು ಬಿಟ್ಟು ತಮ್ಮ ಬದುಕನ್ನೆಲ್ಲ ಬಂಜಾರ ಜನರ ಬದುಕು ನೇವರಿಸಲು ತೊಡಗಿರುವ ಕಾತ್ಯಾಯಿನಿ, ತಮ್ಮ ಸಮಾಜ ಸೇವೆಯ ಈ ಬದುಕಿಗೆ ತಾಯಿಯ ಬೆಂಬಲವೇ ಕಾರಣ ಎಂದು ನೆನೆಯುತ್ತಾರೆ. 'ನನ್ನ ತಾಯಿ ನನಗೆ ಸ್ಫೂರ್ತಿ. ಆಕೆ ದಿನದಲ್ಲಿ ಒಂದು ಹೊತ್ತು ಮಾತ್ರ ಉಣ್ಣುತ್ತಿದ್ದಳು. ಇನ್ನೊಂದು ಹೊತ್ತಿನ ಊಟದ ಹಣವನ್ನು ನನ್ನ ವಿದ್ಯಾಭ್ಯಾಸಕ್ಕಾಗಿ ಉಳಿಸುತ್ತಿದ್ದಳು. ಆಕೆ ನಾನು ವಿದ್ಯಾಭ್ಯಾಸವನ್ನು ಪಡೆಯಬೇಕು, ಬಡ ಜನರ ಸೇವೆ ಮಾಡಬೇಕು ಎಂದು ಬಯಸಿದ್ದಳು' ಎನ್ನುತ್ತಾರೆ. ಕಾತ್ಯಾಯಿನಿಗೆ ದೊರೆತ ಬಾಳಸಂಗಾತಿ ಆತನ ಈ ಸೇವೆಯ ಹಾದಿಗೆ ತಡೆಯಾಗಲಿಲ್ಲ. ಹೆಣ್ಣು ಮಕ್ಕಳ ಶಾಲೆಯಲ್ಲಿ ಪ್ರಾಧ್ಯಾಪಕಳಾದ ಪತ್ನಿ ಮಂಜು ಪತಿಯನ್ನು ಸಮಾಜ ಸೇವೆಗೊಪ್ಪಿಸಿ, ಸಂಸಾರವನ್ನು ಏಕಾಂಗಿಯಾಗಿ ತೂಗಿಸುತ್ತಿದ್ದಾರೆ. ಇವರ ಒಟ್ಟು ಶ್ರಮದಿಂದ, ಎಚ್ಚೆತ್ತ ಬಂಜಾರ ಮಹಿಳೆಯ ಹೋರಾಟದಿಂದ, ಈ ಮಹಿಳೆಯರಿಗೆ, ಅವರ ಜನಾಂಗಕ್ಕೆ ನೆಲೆ ಸಿಗಲೆಂದು ಹಾರೈಸೋಣ. ■

# ಬೌದ್ಧ ಧರ್ಮ ಮತ್ತು ಮಹಿಳೆಯರು

ಭಾರತದ ಚರಿತ್ರೆಯಲ್ಲಿ ಅತ್ಯಂತ ಪ್ರಾಚೀನವಾದ ಸಾಮಾಜಿಕ-ಧಾರ್ಮಿಕ ಚಳುವಳಿಯಾಗಿ ಬೌದ್ಧ ಧರ್ಮವನ್ನು ಕಾಣಬಹುದು. ಮೂಲಭೂತವಾಗಿ ಭೌತಧರ್ಮವು ಒಂದು ನೈತಿಕ ಚಳುವಳಿಯಾಗಿ ಹುಟ್ಟಿಕೊಂಡಿತು. ಹಿಂದೂ ಧರ್ಮವು ಶ್ರೇಣಿಕೃತ, ಅಸಮಾನತೆಯ ಸಮಾಜವಾದರೆ, ಬೌದ್ಧ ಧರ್ಮವು ಸಮಾನತೆಯ ತತ್ವದ ಆಧಾರದ ಮೇಲೆ ಮಾನವೀಯ ಮೌಲ್ಯಗಳನ್ನು ಬೋಧಿಸುವ ಧರ್ಮವಾಯಿತು. ಬುದ್ಧನ ಕಲ್ಪನೆಯ ಸಮಾಜದಲ್ಲಿ ಮಹಿಳೆಯ ಸ್ಥಾನ ಮಾನಗಳೇನಿದ್ದವೆಂಬುದನ್ನು ಗಮನಿಸಿದರೆ ಈ ಧರ್ಮವು ಹೇಗೆ ಸಾಮಾಜಿಕ-ಧಾರ್ಮಿಕ ಚಳುವಳಿಯೆನಿಸಿಕೊಂಡಿತು ಎಂಬ ಅಂಶ ಸ್ಪಷ್ಟವಾಗುತ್ತದೆ.

ಬೌದ್ಧ ಸಾಹಿತ್ಯವು ಸಂಪದ್ಭರಿತವಾದುದು; ಅಷ್ಟೇ ಅಲ್ಲ ಅದರದೇ ಆದ ಕಥನ ಶೈಲಿಯಿಂದ ವಿಶಿಷ್ಟವೂ ಆಗಿವೆ. ಬುದ್ಧನೊಂದಿಗೆ ಸಂವಾದ ನಡೆಸಿದ ಹಲವಾರು ಮಹಿಳೆಯರನ್ನು ಕುರಿತ ಮಾಹಿತಿಗಳು ಈ ಬೌದ್ಧ ಗ್ರಂಥಗಳಲ್ಲಿ ದೊರಕುತ್ತವೆ. ಅಂದಿನ ಸಮಾಜದಲ್ಲಿದ್ದ ಮಹಿಳೆಯರ ಸ್ಥಿತಿಗತಿಗಳ ಮೇಲೂ ಬೆಳಕು ಬೀರುತ್ತವೆ. ತಮ್ಮ ಪುರುಷರೊಂದಿಗೆ ಸೆಣಸಾಡಿ ಹೊಡೆತ ತಿಂದ ಮಹಿಳೆಯರ ಪ್ರಸ್ತಾಪ ಮೊದಲ ಬಾರಿಗೆ ಇದರಲ್ಲಿ ಸಿಗುತ್ತದೆ. ವರ್ಗ ಸಂಘರ್ಷದ ಒತ್ತಡಗಳು, ವರದಕ್ಷಿಣೆ, ಕನ್ಯಾ ಶುಲ್ಕದಂತಹ ಸಾಮಾಜಿಕ ಸಂಸ್ಥೆಗಳ ವಿವರಗಳು ಈ ಸಾಹಿತ್ಯದಲ್ಲಿ ಸಿಕ್ಕುತ್ತವೆ. ಮಹಿಳಾ ಅಧ್ಯಯನಕ್ಕೆ ಬೌದ್ಧ ಗ್ರಂಥವಾದ 'ಥೇರಿಗಾಥಾ' ಬಹು ಮುಖ್ಯ ಆಕರ ಸಾಮಗ್ರಿ. ಈ ಕೃತಿಯು ಮಹಿಳೆಯರು ತಮ್ಮ ಸಂಕೋಲೆಗಳನ್ನು ಮುರಿದುಕೊಂಡು ತಮ್ಮ ಅನುಭವಗಳನ್ನು ಅಭಿವ್ಯಕ್ತಿಸಿದ ಬಹುಮುಖ್ಯ ಕೃತಿಯಾಗಿದೆ.

ಬುದ್ಧನ ಕಾಲದ ಸಮಾಜದ ಚಿತ್ರಣ ನಮಗೆ ಬೌದ್ಧ ಸಾಹಿತ್ಯದಲ್ಲಿ ದೊರಕುತ್ತದೆ. ಆದರಂತೆ ಆರಂಭದ ಬುಡಕಟ್ಟು ಸಮಾಜದಲ್ಲೇ ಖಾಸಗಿ ಆಸ್ತಿ ಮತ್ತು ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳ ಉಗಮವಾಗಿತ್ತು. ಮನುಷ್ಯನ ಅಧಃ ಪತನಕ್ಕೆ ಖಾಸಗಿ ಆಸ್ತಿ ಮತ್ತು ಕುಟುಂಬಗಳೇ ಕಾರಣ ಎಂಬ ಅಂಶವು ಮತ್ತು ಪ್ರಭುತ್ವದ ಕರ್ತವ್ಯವು ಈ ಎರಡೂ ಸಂಸ್ಥೆಗಳಲ್ಲಿ ಅಪರಾಧ ಮಾಡಿದವರನ್ನು ಶಿಕ್ಷಿಸುವುದೂ ಆಗಿತ್ತು. ವ್ಯಭಿಚಾರ ಮತ್ತು ಕಳ್ಳತನ - ಇವೆರಡೂ ಮಹಾಪರಾಧಗಳನ್ನು ಪ್ರಭುತ್ವವು ಉಗ್ರವಾಗಿ ಶಿಕ್ಷಿಸಬೇಕೆಂಬುದು ಬೌದ್ಧ ಧರ್ಮದ ಆಶಯವಾಗಿತ್ತು. ಭೂಮಿಗೆ ಪ್ರಾಧಾನ್ಯತೆ ಸಿಕ್ಕಿ ಮೊದ್ದ ಕೃಷಿ ಸಮಾಜಗಳು ಆರಂಭವಾದದ್ದೇ ಇಲ್ಲಿಂದ. ಈ ಕೃಷಿಕ ಸಮಾಜದಲ್ಲಿ ಮಿಗಿತಾಯವಾದ ಕೃಷಿ ಉತ್ಪನ್ನಗಳಿಂದಾಗಿ ನಗರ ಕೇಂದ್ರಗಳು ಹುಟ್ಟಿಕೊಂಡವು. ಚಿಕ್ಕ ಚಿಕ್ಕ ರಾಜಕೀಯ ಘಟಕಗಳು ಪಾಳೇಗಾರಿಕೆಗಳು ಹುಟ್ಟಿಕೊಂಡ ಕಾಲವಿದು. ಇದರ ನಂತರ ಈ ಚಿಕ್ಕ ಘಟಕಗಳೇ ಮುಂದೆ ಸರ್ವಾಧಿಕಾರದ ರಾಜಸತ್ತೆಗಳಾಗಿ ರೂಪುಗೊಂಡವು.

ಬೌದ್ಧ ಸಾಹಿತ್ಯದಲ್ಲಿ ಚಿತ್ರಣಗೊಂಡ ಸಮಾಜ ಸಂಪೂರ್ಣವಾಗಿ ಪುರುಷಪ್ರಧಾನವಾದುದು. ಒಂದು ತಲೆ ಮಾರಿನಿಂದ ಮತ್ತೊಂದು ತಲೆಮಾರಿಗೆ ಗಂಡಸಿನ ಮೂಲಕವೇ ಮಹಿಳೆಯರು ಜಮೀನನ್ನು ನೋಡಿಕೊಳ್ಳುವ, ಹಣಕಾಸಿನ ವ್ಯವಹಾರವನ್ನು ನಿಭಾಯಿಸಬಲ್ಲ ಪಾತ್ರಗಳಾಗಿ ಬೌದ್ಧ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುತ್ತಾರೆ. ಈ ಉತ್ಪಾದನಾ ಘಟಕದ ಮುಖ್ಯಸ್ಥ ಗಹಪತಿ ಎಂದು ಕರೆಸಿಕೊಳ್ಳುತ್ತಾನೆ. ಅವನು ಜಮೀನಿಗೂ ಒಡೆಯ, ಹಾಗೆಯೇ ಕುಟುಂಬದ ಒಡೆಯನೂ ಆಗಿರುತ್ತಾನೆ.

ಮಹಿಳೆಯರು ಪುರುಷರ ಅಧೀನದಲ್ಲೆ ಇರಬೇಕಾಗಿತ್ತೆಂಬುದನ್ನು ಬೌದ್ಧ ಸಾಹಿತ್ಯಗಳಿಂದಲೂ ನಾವು ತಿಳಿಯಬಹುದು. ತಂದೆ, ಸೋದರ, ಪುತ್ರ ಇಲ್ಲವೇ ಗಣದ ನಿಯಂತ್ರಣದಲ್ಲಿ ಮಹಿಳೆಯರು ಇರಬೇಕಾಗಿತ್ತು. ಅತ್ಯಂತ ಚಿಕ್ಕ ವಯಸ್ಸಿನಲ್ಲೇ ಮದುವೆಯಾಗಿ ಹುಟ್ಟಿದ ಮನೆಯನ್ನು ಬಿಟ್ಟು ತನ್ನ ಉಳಿದ ಆಯುಷ್ಯವನ್ನೆಲ್ಲ ಗಂಡನ ಮನೆಯಲ್ಲಿ ಮಹಿಳೆ ಕಾಲ ಕಳೆಯಬೇಕಾಗಿತ್ತು. ರಾಜಾಸ್ಥಾನದಲ್ಲಿ ಕುಳಿತುಕೊಳ್ಳುವುದಾಗಲೀ, ಯಾವುದೇ ರೀತಿಯ ವ್ಯಾಪಾರ ಮಾಡುವುದಾಗಲೀ, ಸ್ವತಂತ್ರ ವೃತ್ತಿಯನ್ನು ಕೈಗೊಳ್ಳುವುದಾಗಲೀ ಮಹಿಳೆಯಿಂದ ಸಾಧ್ಯವಿರಲಿಲ್ಲ. ಗಂಡನ ಅನುಮತಿಯಿಲ್ಲದೆ ಸ್ವತಃ ಬಿಕ್ಕುಣಿ ಯಾಗಲು ಸಾಧ್ಯವಿರಲಿಲ್ಲ. ಆದರೆ ಗಂಡಸಿಗಾದರೋ ಈ ನಿರ್ಬಂಧವಿರಲಿಲ್ಲ. ಸ್ವತಃ ಬುದ್ಧನೇ ತನ್ನ ಹಸಿಗೂಸನ್ನು ಬಿಟ್ಟು ಹೆಂಡತಿಗೆ ಹೇಳದೆ ಮನೆ ಬಿಟ್ಟು ಹೊರ ನಡೆದದ್ದು ಎಲ್ಲರಿಗೂ ಗೊತ್ತಿದೆ.

ಈ ಬೌದ್ಧ ಸಾಹಿತ್ಯದಲ್ಲಿ ಚಿತ್ರಿತವಾದ ಮಹಿಳೆ ತನ್ನ ಗಂಡ ಮತ್ತು ಮಕ್ಕಳ ಸುಖ ಸಂತೋಷಕ್ಕಾಗಿ ಅವರೊಡನೆ, ಅವರ ಸುತ್ತಲೆ ತಿರುಗುವಂತಹ ವ್ಯಕ್ತಿ, ಗಂಡನ ಪ್ರೀತಿ, ಪ್ರೇಮಗಳನ್ನು ಯಾರೂ ಅಪಹರಿಸದಂತೆ ನೋಡಿಕೊಳ್ಳುವುದೇ ಅವಳ ಜೀವನದ ಮುಖ್ಯ ಗುರಿ. ಅದನ್ನು ಬಿಟ್ಟರೆ ಶೃಂಗಾರ, ವೇಷ

ಭೂಷಣಗಳಲ್ಲಿ ಆಸಕ್ತಳಾಗಿರುವುದೇ ಅವಳ ಸ್ವಭಾವ. ಮಹಿಳೆಯರನ್ನು ಕುರಿತಂತೆ ಪೂರ್ವಾಗ್ರಹ ಪೀಡಿತ ವಿಷಯಗಳೂ ಈ ಸಾಹಿತ್ಯದಲ್ಲಿ ಹೇರಳವಾಗಿ ಸಿಕ್ಕುತ್ತವೆ. ಮಹಿಳೆಯರು ಭಾವುಕರು, ಶೀಘ್ರ ಕೋಪಿಗಳು, ಅಸೂಯಾಪರರು, ಭಯಂಕರ ವ್ಯಕ್ತಿತ್ವಗಳು ಎನ್ನುವಂತಹ ಚಿತ್ರಣಗಳು ಈ ಸಾಹಿತ್ಯದಲ್ಲಿ ಹೇರಳವಾಗಿ ಸಿಕ್ಕುತ್ತವೆ. ಕರಿ ನಾಗರಗಳಂತೆ ಪುರುಷರನ್ನು ಮೋಹಿಸಿ, ಅವರನ್ನು ವಶೀಕರಣಕ್ಕೊಳಪಡಿಸುವ ಜೀವಗಳು - ಎಂಬಂತೆ ಚಿತ್ರಿಸಲಾಗುತ್ತದೆ. ಈ ಸಾಹಿತ್ಯದಲ್ಲಿ ಕಂಡು ಬರುವ ಇಂತಹ ಚಿತ್ರಗಳು, ಅಂದಿನ ಮಹಿಳೆಯರ ಮನಸ್ಥಿತಿಯನ್ನು ಬಿಂಬಿಸುತ್ತದೆ.

ಕುಟುಂಬದಲ್ಲಿ ಗಂಡನಿಗೆ ಹೆಂಡತಿಯ ಬಗ್ಗೆ ಸಂಪೂರ್ಣ ಸ್ವಾಮ್ಯವಿರುತ್ತಿತ್ತು. ಪರಪುರುಷ ಸಂಗ ಮಾಡಿದಕ್ಕಾಗಿ ಹೆಣ್ಣೊಬ್ಬಳನ್ನು ಕೊಲೆ ಮಾಡಲು ಗಂಡನು ರಾಜನಿಂದ ಅನುಮತಿ ಪಡೆದಿದ್ದ. ಇದು ತಿಳಿದ ಹೆಂಡತಿ ಗಂಡನಿಂದ ತಪ್ಪಿಸಿಕೊಂಡು ಬಿಕ್ಕುಬಿ ಸಂಘ ಸೇರಿದ ಉದಾಹರಣೆಯೊಂದು ಇದರಲ್ಲಿ ಚಿತ್ರಿತವಾಗಿದೆ. ವ್ಯಭಿಚಾರವನ್ನು ಉಗ್ರವಾಗಿ ಶಿಕ್ಷಿಸುವ ಪ್ರವೃತ್ತಿಯು ಖಾಸಗಿ ಆಸ್ತಿಯ ಬೆಳವಣಿಗೆಯ ಲಕ್ಷಣಗಳಲ್ಲಿ ಒಂದಾಗಿದೆ.

ಬುದ್ಧ ಮಹಿಳೆಯರ ಬಗ್ಗೆ ಹೊಂದಿದ್ದ ನಿಲುವು ಕೂಡ ಗಮನಿಸಿಬೇಕಾದ್ದು. ವಿಶಾಲವಾದ ಅರ್ಥದಲ್ಲಿ ಬೌದ್ಧ ಧರ್ಮವು ಜಾತಿ, ವರ್ಗ, ಲಿಂಗಾತೀತವಾಗಿ ಕಾಣಿಸಿದರೂ ಆರಂಭದಲ್ಲಿ ಬೌದ್ಧ ಸಂಘಗಳಿಗೆ ಮಹಿಳೆಯರ ಪ್ರವೇಶವನ್ನು ನಿಷೇಧಿಸಿದ್ದನು. ಅಸಮಾಧಾನದಿಂದಲೇ ಬುದ್ಧನ ಸಾಕುತಾಯಿ ಮಹಾಪ್ರಜಾಪತಿ ಗೌತಮಿಯ ಒತ್ತಾಯದ ಮೇರೆಗೆ ಸಂಘಗಳಿಗೆ ಮಹಿಳೆಯರಿಗೆ ಪ್ರವೇಶ ನೀಡಲಾಯಿತು. ಗೌತಮಿಯು ಬಹಳ ದೂರದಿಂದ ಬಿಸಿಲು, ಧೂಳುಗಳನ್ನು ಲೆಕ್ಕಿಸದೆ ಪ್ರಯಾಣ ಮಾಡಿ ಬಂದು ಸಂಘಕ್ಕೆ ಪ್ರವೇಶ ಕೇಳಿದಾಗ ಬುದ್ಧನು ಪ್ರಯತ್ನ ಪೂರ್ವಕವಾಗಿ ಒಪ್ಪಿಕೊಳ್ಳಲೇ ಬೇಕಾಯಿತು. ಬುದ್ಧನಿಗೆ ತೀರ ವ್ಯತಿರಿಕ್ತವಾದದ್ದು ಅವನ ಶಿಷ್ಯ ಆನಂದನ ನಿಲುವು. ಮಹಿಳೆಯರ ಪರವಾಗಿ ಸಹಾನುಭೂತಿ ವ್ಯಕ್ತಪಡಿಸಿದ ಆನಂದ ಈ ದಿಕ್ಕಿನಲ್ಲಿ ಬುದ್ಧನನ್ನು ಪ್ರಭಾವಿಸಿದ್ದೂ ಉಂಟು. ಆದರೆ ಆನಂದನ ಈ ನಿಲುವು ಸಂಘದ ಉಳಿದ ಬಿಕ್ಕುಗಳಿಗೆ ಸಮಂಜಸವೆನಿಸಲಿಲ್ಲ. ಬುದ್ಧನೇ ಮಹಿಳೆಯರ ಪ್ರವೇಶದಿಂದ ಸಂಘವು ಬೇಗ ಕುಸಿಯುತ್ತದೆ ಎಂದು ಭಾವಿಸಿದ್ದ.

ಸಂಘದೊಳಗೆ ಬಿಕ್ಷುಣಿಯರು ಪ್ರವೇಶಿಸಿದ ನಂತರವೂ ಅವರು ಬಿಕ್ಕುಗಳ ಉಸ್ತುವಾರಿಯಲ್ಲೇ ಕಾರ್ಯ ನಿರ್ವಹಿಸಿದರು. ಮಹಾಪ್ರಜಾಪತಿ ಗೌತಮಿಯು ಎಂಟು ಪೂರ್ವ ಷರತ್ತುಗಳಿಗೆ ಒಪ್ಪಿದ ನಂತರವೇ ಬೌದ್ಧ ಸಂಘಗಳಲ್ಲಿ ಮಹಿಳೆಯರಿಗೆ ಪ್ರವೇಶ ಸಿಕ್ಕಿದ್ದರಿಂದ ಈ ರೀತಿಯ ಶಿಸ್ತಿನ ನಿಯಂತ್ರಣಗಳನ್ನು ಮಹಿಳೆಯರು ಗೌರವಿಸಲೇಬೇಕಾಯಿತು. ಬಿಕ್ಷಾಟನೆಯಿಂದ ತಾವು ತಂದ ಹೆಚ್ಚಿನ ಆಹಾರವನ್ನು ಬಿಕ್ಕುಗಳೊಂದಿಗೆ ಬಿಕ್ಷುಣಿಯರು ಹಂಚಿಕೊಳ್ಳಬೇಕಾಗಿತ್ತು.

ಬೌದ್ಧ ಗ್ರಂಥಗಳಲ್ಲಿ ಹೆಚ್ಚಾಗಿ ಕಂಡುಬರುವ ಹೆಸರು ವಿಶಾಖ ಮಿಗರಮಾತಾ. ಶ್ರೀಮಂತ ಗಹಪತಿಯೊಬ್ಬನ ಮಗಳಾದ ಈಕೆ ಸಾವತ್ತಿಯ ಮತ್ತೊಬ್ಬ ಗಹಪತಿಯನ್ನು ಮದುವೆಯಾಗುತ್ತಾಳೆ. ಅವಳ ಮಾವನನ್ನು ಒತ್ತಾಯಿಸಿ ಬೌದ್ಧ ಧರ್ಮಕ್ಕೆ ಸೇರಿಕೊಳ್ಳುವಂತೆ ಪ್ರೋತ್ಸಾಹಿಸುತ್ತಾಳೆ. ಬುದ್ಧನೊಂದಿಗೆ ಪದೇ-ಪದೇ ಸಂಪರ್ಕಿಸಿ, ಸಂವಾದಗಳಲ್ಲಿ ಭಾಗವಹಿಸಿ ಹಲವಾರು ಪ್ರವಚನಗಳನ್ನು ನೀಡಿದವಳು ಇವಳು. ಅವಳು ಅತ್ಯಂತ ಪ್ರಭಾವಿ ವ್ಯಕ್ತಿಯಾಗಿದ್ದು, ಅವಳ ಸಲಹೆಯ ಮೇರೆಗೆ ಮಹಿಳೆಯರ ಅನುಕೂಲಕ್ಕಾಗಿ ಹಲವಾರು ನಿಯಮಗಳನ್ನು ಸಂಘದೊಳಗೆ ಮಾಡಲಾಯಿತು. ಅವಳು ಸಂಘಕ್ಕೆ ಹೇರಳವಾಗಿ ಧನ ಸಹಾಯ ಮಾಡಿದ್ದಳು.

ಆರಂಭದ ಬೌದ್ಧ ಸಾಹಿತ್ಯದಲ್ಲಿ ನಮಗೆ ಮೂರು ರೀತಿಯ ಮಹಿಳೆಯರು ಕಾಣಸಿಗುತ್ತಾರೆ. ಮಹಿಳೆಯರು ಸಾಂಪ್ರದಾಯಿಕವಾಗಿ ಪತ್ನಿ-ಮಾತೆಯರ ಪಾತ್ರಗಳಲ್ಲಿ ಕಂಡು ಬರುವುದು ಹೆಚ್ಚು. ಸಾಮಾನ್ಯವಾಗಿ ಎಲ್ಲ ಮಹಿಳೆಯರೂ ವಿವಾಹಿತರಾಗಲೇ ಬೇಕೆಂಬುದು ನಿಯಮ. ಬೌದ್ಧ ಗ್ರಂಥ 'ಮಿಲಿಂದಪನ್ಹ'ದಲ್ಲಿ ಅವಿವಾಹಿತ ಮಹಿಳೆಯೆಂದರೆ ತಿಂಡಿ ಪೋತ, ಮಹಾಪಾಪಿ ಮತ್ತು ಚಾರಿತ್ರ್ಯ ಹೀನಳೆಂಬಂತಹ ಅರ್ಥ ಬರುವಂತೆ ಚಿತ್ರಿಸಲಾಗಿದೆ. ಮದುವೆಯೊಳಗೂ ಹೆಂಗಸು ಮುಖ್ಯವಾಗಿ 'ಸೇವೆ'ಯೊಂದೇ ಜೀವನದ ಸಾರವೆಂದು ಭಾವಿಸಬೇಕು. ಗೃಹಕೃತ್ಯದ ಚಾಕರಿಯೇ ಅವಳ ಮುಖ್ಯ ಕೆಲಸ. ಬಡ ಹೆಣ್ಣು ಮಗಳಾದರೆ ಮನೆಯ ಒಳಗಿನ ಚಾಕರಿಯ ಜೊತೆಗೆ ಶ್ರೀಮಂತರ ಮನೆಗಳಲ್ಲೂ ದುಡಿಯಬೇಕು. ಮದುವೆಯೊಳಗೂ ಲೈಂಗಿಕವಾಗಿ ಅವಳು ಶೋಷಣೆಗೆ ಒಳಗಾಗಬಹುದು. ಬುದ್ಧನೇ ಸ್ವತಃ ಗಂಡನ ಅಗತ್ಯಗಳನ್ನು ನೋಡಿಕೊಳ್ಳುವವಳೇ ಆದರ್ಶ ಮಹಿಳೆ ಎಂಬರ್ಥದಲ್ಲಿ ಹೇಳಿದ್ದಾನೆ. ಇಷ್ಟಾದರೂ ಅವಳಿಗೆ ಕುಟುಂಬದಲ್ಲಿ ಒಳ್ಳೆಯ ಮರ್ಯಾದೆ ದೊರಕುತ್ತದೆಂಬ ಗ್ಯಾರಂಟಿಯೇನೂ ಇಲ್ಲ. ಒಬ್ಬ ಮಹಿಳೆ 'ಧಮ್ಮ'ದ ಪ್ರವಚನವನ್ನು ಕೇಳುವ ಆಸೆಯಿಂದ

ಗಂಡನಿಂದ ಅನುಮತಿ ಪಡೆದು ಹದಿನೈದು ದಿನ ಸಂಘಕ್ಕೆ ಬರುತ್ತಾಳೆ. ಅವಳ ಗೈರು ಹಾಜರಿಯಲ್ಲಿ ಗಂಡನಿಗೆ ತನ್ನ ಸೇವೆಯನ್ನು ಮಾಡಿಸಿಕೊಳ್ಳಲು ಗಣಿಕೆಯೊಬ್ಬಳ ವ್ಯವಸ್ಥೆ ಮಾಡುತ್ತಾಳೆ. ಈ ವ್ಯವಸ್ಥೆಗೆ ಒಪ್ಪಿಕೊಂಡ ಗಂಡ ಉದಾರಿ ಎಂಬಂತೆ ಮೇಲ್ನೋಟಕ್ಕೆ ಕಂಡರೂ ಹೆಂಡತಿಯನ್ನು ಪರ್ಯಾಯ ವಸ್ತುವೆಂಬಂತೆ ಬಳಸಬಹುದು ಎಂಬ ಅಂಶವೇ ಅಸಹ್ಯವೆನಿಸುತ್ತದೆ. ಹಾಗೆಯೇ ಹೆಣ್ಣಿನ ಸ್ವಾತಂತ್ರ್ಯಾಕಾಂಕ್ಷೆಗೆ ಯಾವುದೇ ತ್ಯಾಗವಾದರೂ ಸರಿ ಎಂಬ ಭಾವ ಇಲ್ಲಿ ವ್ಯಕ್ತವಾಗುತ್ತದೆ.

ಬೌದ್ಧ ಸಾಹಿತ್ಯದಲ್ಲಿ ನಮಗೆ ಸಿಗುವ ಮತ್ತೊಂದು ಹೆಣ್ಣಿನ ಪಾತ್ರವೆಂದರೆ ವೇಶ್ಯೆಯರದು. ಅವಳ ಸ್ಥಾನ ಮಾನ ಗೃಹಿಣಿಯರದಕ್ಕಿಂತ ಉತ್ತಮವಾಗಿತ್ತು. ಅವಳಿಗೆ ಸಾಕಷ್ಟು ಸ್ವಾತಂತ್ರ್ಯವಿರುತ್ತಿತ್ತು. ಅದರಿಂದಾಗಿ ಉಳಿದ ಹೆಂಗಸರಿಗಿಂತ ಹೆಚ್ಚಿನ ಆತ್ಮ ವಿಶ್ವಾಸವಿರುತ್ತಿತ್ತು. ಗೃಹಿಣಿಯರಿಗೆ ಇರದಂತಹ ಸಂಪತ್ತಿನ ಒಡೆತನ ಹಾಗೂ ಅವುಗಳನ್ನು ಮಾರುವ ದಾನ ಕೊಡುವ ಸ್ವಾತಂತ್ರ್ಯವೂ ವೇಶ್ಯೆಯರಿಗಿತ್ತು. ಬೌದ್ಧ ಸಾಹಿತ್ಯದಲ್ಲಿ ಚಿತ್ರಿತವಾದ ಅಂಬಾಪಾಲಿ ಅಂತಹ ಸ್ವಾತಂತ್ರ್ಯವನ್ನು ಧಿಕ್ಕರಿಸಿ ಬುದ್ಧನಿಗೆ ಸೇವೆ ಮಾಡಲು ಬಂದವಳು. ಆದರೆ ವೇಶ್ಯೆಯರ ಸ್ವಾತಂತ್ರ್ಯವೂ ಒಂದು ಸೀಮಿತವಲಯದಲ್ಲಿಯೇ ಕೆಲಸ ಮಾಡುವಂತಹುದು. ಲೈಂಗಿಕ ಶೋಷಣೆಯ ಎಲ್ಲ ಕ್ರೂರ ಮುಖಗಳ ಅನುಭವವನ್ನೂ ಇವರು ಎದುರಿಸಬೇಕಾಗುತ್ತದೆ. ಆದರೆ ಈ ಹೆಣ್ಣುಗಳಿಗೂ ಬೌದ್ಧ ಸಂಘಗಳಲ್ಲಿ ಪ್ರವೇಶವಿತ್ತು ಎನ್ನುವುದು ಗಮನಾರ್ಹವಾದ ವಿಷಯ.

ಬೌದ್ಧ ಸಾಹಿತ್ಯದಲ್ಲಿ ನಮಗೆ ಕಾಣಸಿಗುವ ಮೂರನೆಯ ಬಹುಮುಖ್ಯವಾದ ಪಾತ್ರವೆಂದರೆ ಬಿಕ್ಷುಣಿಗಳದು. ವೇಶ್ಯೆಯರು ಮತ್ತು ಬಿಕ್ಷುಣಿಯರಿಬ್ಬರೂ ಒಂದು ಅಂಶದಲ್ಲಿ ಸಮಾನರು. ಕುಟುಂಬದಲ್ಲಿರುವ ವಿವಾಹಿತ ಸಂಬಂಧಗಳಲ್ಲಿ ಪುರುಷ ಹೊರಿಸುವ ದಾಸ್ಯವನ್ನು ಧಿಕ್ಕರಿಸಿ ಸ್ವತಂತ್ರರಾದವರು ವೇಶ್ಯೆಯರಿಗಿಂತ ಬಿಕ್ಷುಣಿಯರು ಅತ್ಯಂತ ಮುಕ್ತವಾದ ಹಂತ ತಲುಪಿದರು. ಪುರುಷನ ನಿಯಂತ್ರಣದಿಂದ ಹೊರಗುಳಿದವರು. ಹೆಣ್ಣಿಗೆ ವಿಧಿಸಿರುವ ಎಲ್ಲ ಸಾಮಾಜಿಕ ಬಂಧನಗಳನ್ನು ಮುರಿದವರು ಇವರು. ಗೃಹಕೃತ್ಯದ ಚಾಕರಿಯಿಂದ ವಿಶೇಷವಾಗಿ ಮುಕ್ತಳಾದ ಥೇರಿಯೊಬ್ಬಳು ಹಾಡಿರುವುದು ಹೀಗೆ:-

ಓ ಎಂಥ ಬಿಡುಗಡೆ! ಅಮೋಘವಾದ ಬಿಡುಗಡೆ
ಮುಕ್ತಳಾಗಿರುವೆ ಈಗ ಮೂರು ಹಾಳು ಜಂಜಾಟಗಳಿಂದ
ಬೀಸುವ ಕಲ್ಲಿನಿಂದ, ಕುಟ್ಟುವ ಒನಕೆಯಿಂದ
ಗೂನು ಬೆನ್ನಿನ ಗಂಡನಿಂದ

ಬಿಕ್ಷುಣಿಯರಿಗೆ ಹೆಚ್ಚಿನ ಸ್ವಾತಂತ್ರ್ಯ, ಹೆಚ್ಚಿನ ಓಡಾಡುವ ಸಾಧ್ಯತೆಗಳು ಇರುತ್ತಿದ್ದವು. ಪ್ರವಚನಗಳನ್ನು ನೀಡುವ ಬಿಕ್ಷುಣಿಯರಿಗೆ ಸಾಮಾಜಿಕ ಹಾಗೂ ರಾಜಕೀಯ ಮಾನ್ಯತೆಯಿರುತ್ತಿತ್ತು. ಸಂಘದೊಳಗೆ ಶೇಕಡ 13ರಷ್ಟು ಬಿಕ್ಷುಗಳಿಗೆ ಕೊನೆಯ ಹಂತ 'ಅರ್ಹಂತ' ಸ್ಥಿತಿ ತಲುಪುವುದಕ್ಕೆ ಸಾಧ್ಯವಾದರೆ ಮಹಿಳೆಯರಿಗೆ ಶೇಕಡ 23ರಷ್ಟು 'ಅರ್ಹಂತ' ಸ್ಥಿತಿ ತಲುಪಲು ಸಾಧ್ಯವಾಗಿತ್ತು. ಮಹಿಳೆಯರ ಈ ಸಮೃದ್ಧ ಪ್ರಯತ್ನಗಳಿಗೆ ಬೌದ್ಧ ಸಾಹಿತ್ಯದಲ್ಲಿ ಮೆಚ್ಚುಗೆ ಸಾಕಷ್ಟು ಸಿಕ್ಕಿಲ್ಲ.

ಕನ್ನಡದ ಸಂಗ್ರಹ ರೂಪ: ಆಶಾ
ಕೃಪೆ: ಮಾನುಷಿ

## ಪರೋಪಕಾರದ ಹೆಸರಿನಲ್ಲಿ ಲೈಂಗಿಕ ಶೋಷಣೆ

ಮುಂಬೈ ಕೊಳಗೇರಿಗಳಲ್ಲಿರುವ ಬಡ ಮಕ್ಕಳಿಗೆ ಬಟ್ಟೆ ಮತ್ತು ಉಡುಗೊರೆಯ ಆಮಿಷ ತೋರಿಸಿ ಅವರನ್ನು ಕಾಮ ಕ್ರೀಡೆಗೆ ಉಪಯೋಗಿಸಿಕೊಂಡ ಅಪರಾಧಕ್ಕಾಗಿ ಸ್ವಿಸ್ ದಂಪತಿಗಳನ್ನು ಸ್ವಿಸ್ ಪೋಲೀಸರು ಬಂಧಿಸಿದ್ದಾರೆ. ಸ್ಟೀನ್ ಹಾಸೆನ್ ಎಂಬ ಹಳ್ಳಿಯಲ್ಲಿರುವ ವಿಲಿಯಂ ಮಾರ್ಟಿ ಮತ್ತು ಲಿಲಿ ಮಾರ್ಟಿ ದಂಪತಿಗಳ ಮನೆಗೆ ಪೋಲೀಸರು ದಾಳಿ ಮಾಡಿ ಅವರಿಂದ ಹಲವಾರು ಅಶ್ಲೀಲ ಪೋಟೋಗ್ರಾಫ್‌ಗಳನ್ನೂ ವಶಪಡಿಸಿ ಕೊಂಡಿದ್ದಾರೆ.

ವಿಲಿಯಂ ಮಾರ್ಟಿ ಮತ್ತು ಲಿಲಿ ಮಾರ್ಟಿಯವರು ಮುಂಬೈನ ಕೊಳಗೇರಿಯ ಬಡಮಕ್ಕಳಿಗೆ ಹಣದ ಆಸೆ ತೋರಿಸಿ ಮತ್ತು ಹೋಟೆಲಿಗೆ ಕರೆದುಕೊಂಡು ಹೋಗಿ ಬೆತ್ತಲೆ ಚಿತ್ರಗಳನ್ನು ಚಿತ್ರೀಕರಿಸಿಕೊಂಡಿದ್ದರು. ಹೀಗೆ ಮಾಡುವಾಗ ಮುಂಬೈ ಪೋಲೀಸರೂ ಇವರನ್ನು ಬಂಧಿಸಿದ್ದರು. ದಂಪತಿಗಳು ಈ ಬೆತ್ತಲು ಚಿತ್ರಗಳನ್ನು ತಮ್ಮ ಲ್ಯಾಪ್‌ಟಾಪ್ ಕಂಪ್ಯೂಟರ್‌ಗೆ ಅಳವಡಿಸಿಕೊಂಡಿದ್ದರು. ಮುಂಬೈನಲ್ಲಿರುವಾಗ ಈ ದಂಪತಿಗಳು ಬಡ ಮಕ್ಕಳನ್ನು ಶ್ರೀಮಂತ ರೆಸಾರ್ಟ್‌ಗಳಿಗೆ ಕೊಂಡೊಯ್ದು ಅಲ್ಲಿ ಅವರ ಮೇಲೆ ಲೈಂಗಿಕ ಹಲ್ಲೆ ಮಾಡಿ ತಮ್ಮ ಕಾಮದಾಸೆಗೆ ಬಳಸಿಕೊಳ್ಳುತ್ತಿದ್ದರೆಂದು ಹಿಂದೆ ಮುಂಬೈ ಪೋಲೀಸರು ಆರೋಪಿಸಿದ್ದರು.

# 'ವೈದ್ಯಕೀಯ ನಿರ್ಲಕ್ಷ್ಯ-ಪರಿಹಾರ

- ಹೇಮಲತಾ ಮಹಿಷಿ

ಗ್ರಾಹಕರ ಹಿತವನ್ನು ರಕಿಸುವುದಕ್ಕಾಗಿ ನಮ್ಮ ದೇಶದಲ್ಲಿ 1986ರಲ್ಲಿ ಕಾನೂನೊಂದನ್ನು ಜಾರಿಗೆ ತರಲಾಗಿದೆ. ಹಣವನ್ನು ಕೊಟ್ಟು ವಸ್ತುಗಳನ್ನು ಖರೀದಿ ಮಾಡುವವರಲ್ಲದೇ 'ಸೇವೆ'ಯನ್ನು ಖರೀದಿ ಮಾಡುವವರೂ ''ಗ್ರಾಹಕ''ರೆನಿಸುತ್ತಾರೆ. ವಸ್ತುಗಳಲ್ಲಿ ಕುಂದಿದ್ದರೆ, ಸೇವೆಯಲ್ಲಿ ಕೊರತೆಯಿದ್ದರೆ ಅದರಿಂದ ತೊಂದರೆಗೆ ಒಳಗಾದವರು ಕೆಲವೊಂದು ಸಂದರ್ಭಗಳಲ್ಲಿ ಗ್ರಾಹಕರು ಹಿತರಕ್ಷಣಾ ವೇದಿಕೆಗೆ ಅರ್ಜಿಹಾಕಬಹುದು ಅಥವಾ ನ್ಯಾಯಾಲಯಕ್ಕೂ ಮೊರೆ ಹೋಗಬಹುದು. ವೇದಿಕೆಗೆ ಅರ್ಜಿ ಹಾಕಿದಲ್ಲಿ ಅದಕ್ಕೆ ಹೆಚ್ಚಿನ ನ್ಯಾಯಾಲಯ ಶುಲ್ಕ ತೆರಬೇಕಾಗಿರುವುದಿಲ್ಲ, ಅಲ್ಲದೇ ನ್ಯಾಯಾಲಯದಲ್ಲಿರುವಂತೆ ಹೆಚ್ಚಿನ ವಿಧಿ-ವಿಧಾನಗಳೂ ಇರುವುದಿಲ್ಲ. ಇದರಿಂದ ಬೇಗ ವ್ಯಾಜ್ಯದ ತೀರ್ಮಾನವಾಗಲು ಅವಕಾಶವಾಗುತ್ತದೆ. ಆದರೆ,ವಿಷಯ ಕ್ಲಿಷ್ಟಕರವಾಗಿದ್ದಾಗ ನ್ಯಾಯಾಲಯದಲ್ಲಿಯೇ ದಾವೆ ದಾಖಲು ಮಾಡಬೇಕಾಗುತ್ತದೆ. ವೈದ್ಯಕೀಯ ಸೇವೆಯ ಕೊರತೆಯಿಂದಾಗಿ, ವೈದ್ಯರ ನಿರ್ಲಕ್ಷ್ಯದಿಂದಾಗಿ ತೊಂದರೆಗೆ ಒಳಗಾದ ಮಹಿಳೆಯೊಬ್ಬಳು ನ್ಯಾಯಾಲಯದ ಮೊರೆ ಹೊಕ್ಕು ಸೂಕ್ತ ಪರಿಹಾರ ಪಡೆದಿರುವುದು ಇಂತಹ ಪ್ರಕರಣಗಳಲ್ಲಿ ಒಂದು ಮಾರ್ಗದರ್ಶಿ ಪ್ರಕರಣವಾಗಿದೆ.

ನಮ್ಮ ದೇಶದ ಎಲ್ಲಾ ರಾಜ್ಯಗಳಲ್ಲಿರುವಂತೆ ಹರಿಯಾಣ ರಾಜ್ಯವೂ ಕುಟುಂಬ ನಿಯಂತ್ರಣದ ಭಾಗವಾಗಿ ಸಂತಾನಹರಣ ಶಸ್ತ್ರಚಿಕಿತ್ಸೆಯನ್ನು ಬಳಕೆಗೆ ತಂದಿದೆ. 1988ರಲ್ಲಿ ಆ ಯೋಜನೆಯ ಲಾಭ ಪಡೆದುಕೊಳ್ಳಲು ಶ್ರೀಮತಿ ಸಂತರಾ ಗುರಗಾಂನ ಮುಖ್ಯ ಆರೋಗ್ಯ ವೈದಾಧಿಕಾರಿಯವರ ಬಳಿ ಹೋಗಿ ತನಗೆ ಮಕ್ಕಳು ಬೇಡವೆಂದು ಶಸ್ತ್ರಕ್ರಿಯೆ ಮಾಡುವಂತೆಯೂ ಕೇಳಿಕೊಂಡಳು. 4-2-88ರಂದು ಶಸ್ತ್ರ ಚಿಕಿತ್ಸೆ ನಡೆದು ಆ ಬಗ್ಗೆ ಅವಳಿಗೆ ಒಂದು ಪ್ರಮಾಣ ಪತ್ರವನ್ನೂ ನೀಡಲಾಯಿತು. ಶಸ್ತ್ರಚಿಕಿತ್ಸೆ ಯಶಸ್ವಿಯಾಗಿರುವುದಾಗಿಯೂ, ಅವಳಿಗೆ ಮುಂದೆ ಮಕ್ಕಳಾಗುವ ಭಯವಿಲ್ಲವೆಂದು ಅವಳಿಗೆ ಭರವಸೆ ಕೊಡಲಾಯಿತು. ಆದರೆ, ಸ್ವಲ್ಪ ದಿನದಲ್ಲಿಯೇ ಅವಳು ಪುನಃ ಗರ್ಭಿಣಿಯಾದಳು. ಈ ಬಗ್ಗೆ ಅವಳು ಗುರಗಾಂ ಆಸ್ಪತ್ರೆಯಲ್ಲಿ ವೈದ್ಯರನ್ನು ಕಂಡಾಗ ಅವರು, ಅವಳು ಗರ್ಭಿಣಿ ಅಲ್ಲವೆಂದು ತಿಳಿಸಿದರು. ಇನ್ನೆರಡು ತಿಂಗಳಲ್ಲಿ ಬಸಿರು ಬೆಳೆದಾಗ ಅವಳು ಪುನಃ ವೈದ್ಯರುಗಳನ್ನು ಕಂಡಾಗ ಶಸ್ತ್ರ ಚಿಕಿತ್ಸೆ ಯಶಸ್ವಿಯಾಗಿಲ್ಲವೆಂದು ಅವರು ಒಪ್ಪಿಕೊಂಡರು, ಅವಳು ಗರ್ಭಪಾತ ಮಾಡುವಂತೆ ಕೇಳಿಕೊಂಡಾಗ ಅದರಿಂದ ಅವಳ ಪ್ರಾಣಕ್ಕೆ ಅಪಾಯವೆಂದು ನಿರಾಕರಿಸಲಾಯಿತು. ಕೊನೆಗೆ ಸಂತರಾಗೆ ಹೆಣ್ಣು ಮಗುವಾಯಿತು. ಈಗಾಗಲೇ ಏಳು ಮಕ್ಕಳಿದ್ದ ಅವಳ ಮೇಲೆ 8ನೇಯ ಮಗುವನ್ನು ಸಾಕುವ-ಸಲಹುವ, ಶಿಕ್ಷಣ ಕೊಡಿಸುವ ಹೊಣೆಗಾರಿಕೆ, ಖರ್ಚು ಬಂದು ಬಿದ್ದವು.

ಈ ಸಂದರ್ಭದಲ್ಲಿ ಸಂತರಾ ಶಸ್ತ್ರಚಿಕಿತ್ಸೆಯನ್ನು ನಿರ್ಲಕ್ಷ್ಯದಿಂದ ಮಾಡಿ ತನಗೆ ಹಾನಿ ಉಂಟುಮಾಡಿದಕ್ಕಾಗಿ ರಾಜ್ಯ ಸರ್ಕಾರದಿಂದ 2 ಲಕ್ಷ ರೂಪಾಯಿಗಳ ಕೋರಿ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದಳು. ತಮ್ಮ ಸರ್ಕಾರಿ ಆಸ್ಪತ್ರೆಯ ವೈದ್ಯರಿಂದ ಯಾವುದೇ ನಿರ್ಲಕ್ಷ್ಯದ ಶಸ್ತ್ರ ಚಿಕಿತ್ಸೆ ಆಗಿಲ್ಲವೆಂದು ಹೇಳಿ ರಾಜ್ಯಸರ್ಕಾರ ಅದನ್ನು ವಿರೋಧಿಸಿತು. ಅಲ್ಲದೇ ಯಾವುದೇ ಕಾರಣಕ್ಕೆ ಶಸ್ತ್ರಚಿಕಿತ್ಸೆ ವಿಫಲವಾದಲ್ಲಿ ತಾನು ನಷ್ಟಪರಿಹಾರ ಕೋರುವುದಿಲ್ಲವೆಂದು ಸಂತರಾಳೇ ಪತ್ರವೊಂದರ ಮೇಲೆ ತನ್ನ ಹೆಬ್ಬೆರಳಿನ ಗುರುತು ಹಾಕಿದ್ದಾಳೆಂದೂ, ಆದ್ದರಿಂದ ಅವಳಿಗೆ ಪರಿಹಾರ

ಕೋರಲು ಯಾವುದೇ ಅಧಿಕಾರವಿಲ್ಲವೆಂದೂ ಸರ್ಕಾರ ಪ್ರತಿವಾದ ಹೂಡಿತು.

ಸಾಕ್ಷಿವಿಚಾರಣೆಯಲ್ಲಿ ಸಂತರಾಳ ಬಲ ಫೆಲೋಪಿಯನ್ ನಳಿಕೆಗೆ ಮಾತ್ರ ಶಸ್ತ್ರ ಚಿಕಿತ್ಸೆ ಮಾಡಿದ್ದು ಎಡ ನಳಿಕೆಯನ್ನು ಹಾಗೆಯೇ ಬಿಟ್ಟಿರುವುದು ಬೆಳಕಿಗೆ ಬಂದಿತು. ಇದು ವೈದ್ಯರ ನಿರ್ಲಕ್ಷ್ಯವಲ್ಲದೇ ಬೇರೇನೂ ಅಲ್ಲವೆಂದು ಕೆಳನ್ಯಾಯಾಲಯ ಹಾಗೂ ಮೊದಲ ಅಪೀಲು ನ್ಯಾಯಾಲಯಗಳು ತೀರ್ಮಾನಕ್ಕೆ ಬಂದವು. ಈ ನಿರ್ಲಕ್ಷ್ಯದಿಂದಾಗಿಯೇ ಬೇಡವಾಗಿದ್ದರೂ ಮತ್ತೊಂದು ಹೆಣ್ಣು ಮಗು ಹುಟ್ಟಿ ಆರ್ಥಿಕ ಹೊಣೆಗಾರಿಕೆಯಲ್ಲದೇ ಮನಸ್ಸಿನ ಕ್ಲೇಶವನ್ನು ಉಂಟು ಮಾಡಿರುವುದಾಗಿ ನ್ಯಾಯಾಂಗ ಭಾವಿಸಿದವು. 54,000 ರೂಗಳನ್ನು ಪರಿಹಾರ ಧನವಾಗಿ ನೀಡಿ ಅದರ ಮೇಲೆ 12% ಬಡ್ಡಿಯನ್ನು ಕೊಡಬೇಕೆಂದು ನಿರ್ದೇಶಿಸಿ ಡಿಕ್ರಿ ಮಾಡಲಾಯಿತು. ಉಚ್ಚನ್ಯಾಯಾಲವು ರಾಜ್ಯಸರ್ಕಾರ ಸಲ್ಲಿಸಿದ ಎರಡನೇ ಅಪೀಲನ್ನು ವಜಾ ಮಾಡಿತು. ಸರ್ವೋಚ್ಚ ನ್ಯಾಯಾಲಯದಲ್ಲಿ ರಾಜ್ಯ ಸರ್ಕಾರ ಈ ಆಜ್ಞೆಯನ್ನು ಪ್ರಶ್ನಿಸಿತು.

ವೈದ್ಯಕೀಯ ವೃತ್ತಿಯನ್ನು ಪ್ರವೇಶಿಸುವ ಪ್ರತಿಯೊಬ್ಬ ವೈದ್ಯನೂ ಯಥೋಜಿತವಾದ ನಿಪುಣತೆ ಹಾಗೂ ಜಾಗರೂಕತೆಯಿಂದ ಕೂಡಿ ತನ್ನ ಕೆಲಸ ನಿರ್ವಹಿಸುವು ಕರ್ತವ್ಯವನ್ನು ಹೊಂದಿರುತ್ತಾನೆ ಹಾಗೆಂದು ಇಂಗಿತರೂಪದ ಪ್ರಮಾಣವನ್ನು ಮಾಡಿರುತ್ತಾನೆ. ಒಂದು ಕೇಸನ್ನು ತೆಗೆದುಕೊಳ್ಳಬೇಕೇ ಇಲ್ಲವೇ ಎನ್ನುವುದನ್ನು ನಿರ್ಧರಿಸುವಾಗ, ಯಾವ ಚಿಕಿತ್ಸೆ ಕೊಡಬೇಕೆಂಬುದನ್ನು ನಿರ್ಧರಿಸುವಾಗ, ಚಿಕಿತ್ಸೆ ಕೊಡುತ್ತಿರುವಾಗ ಜಾಗರೂಕತೆ ವಹಿಸುವ ಕರ್ತವ್ಯ ಅವನ ಮೇಲಿರುತ್ತದೆ. ಈ ಯಾವುದೇ ಕರ್ತವ್ಯದಲ್ಲಿಲೋಪವಾದರೂ, ನಿರ್ಲಕ್ಷ್ಯದ ಕಾರಣಕ್ಕಾಗಿ ವ್ಯಾಜ್ಯಹೂಡಿ, ಪರಿಹಾರ ಪಡೆಯುವ ಹಕ್ಕು ರೋಗಿಗೆ ಇರುತ್ತದೆ. ಸಂತರಾಳ ಪ್ರಕರಣದಲ್ಲಿ ಈ ರೀತಿಯ ವೈದ್ಯಕೀಯ ನಿರ್ಲಕ್ಷ್ಯವಿದೆ.

ನಮ್ಮ ದೇಶ ವಿಶ್ವದಲ್ಲಿಯೇ ಎರಡನೆಯ ಅತಿ ಹೆಚ್ಚಿನ ಜನಸಂಖ್ಯೆ ಇರುವ ದೇಶ. ಜನಸಂಖ್ಯಾ ಸ್ಫೋಟವನ್ನು ತಡೆಗಟ್ಟದಿದ್ದರೆ ದೇಶ ಸಮೃದ್ಧಿ ಸಾಧಿಸಲು, ಪ್ರಗತಿ ಹೊಂದಲು ಸಾಧ್ಯವಿಲ್ಲ. ಕುಟುಂಬ ನಿಯಂತ್ರಣ ಒಂದು ರಾಷ್ಟ್ರೀಯ ಯೋಜನೆ. ಈ ಯೋಜನೆಯ ಯಶಸ್ವಿ ಜಾರಿ ಸರ್ಕಾರಿ ಅಧಿಕಾರಿಗಳು ಹಾಗೂ ವೈದ್ಯರ ಕೈಯಲ್ಲಿ ಇದೆ. ನಿರ್ಲಕ್ಷ್ಯದಿಂದ ಇಂತಹ ಕುಟುಂಬ ಹರಣ ಶಸ್ತ್ರಚಿಕಿತ್ಸೆ ನಡೆಸಿದಲ್ಲಿ ಕುಟುಂಬ ನಿಯಂತ್ರಣ ಯೋಜನೆ ದೇಶದಲ್ಲಿ ವಿಫಲವಾಗುತ್ತದೆ. ಇಂತಹ ಶಸ್ತ್ರ ಚಿಕಿತ್ಸೆಗೆ ಒಳಗಾದ ವ್ಯಕ್ತಿಗಳ ನಂಬಿಕೆಯೂ ಭಂಗವಾಗಿ ''ಬೇಡವಾದ ಮಕ್ಕಳು'' ಹುಟ್ಟುತ್ತವೆ. ಇಂತಹ ''ಬೇಡವಾದ ಮಕ್ಕಳ''ನ್ನು ಬೆಳೆಸುವ ಖರ್ಚನ್ನು ಯಾರು ವಹಿಸಬೇಕು? ಎನ್ನುವುದನ್ನು ಈ ಪ್ರಕರಣದಲ್ಲಿ ನಾವು ತೀರ್ಮಾನಿಸಬೇಕಾಗಿದೆ ಎಂದು ಸರ್ವೋಚ್ಚ ನ್ಯಾಯಾಲಯ ತಿಳಿಸಿ ಕೆಳ ನ್ಯಾಯಾಲಯವು ಕೊಟ್ಟಿರುವ 54,000 ರೂಗಳು ಬೇಡದ ಆ ಮಗು ಪ್ರಾಪ್ತವಯಸ್ಸಿಗೆ ಬರುವವರೆಗಿನ ಅದರ ಖರ್ಚಿಗಾಗಿ ವರ್ಷಕ್ಕೆ 3000ರೂ ನಂತೆ ಲೆಕ್ಕಹಾಕಿ ಕೊಡಲಾಗಿದೆ. ತಮ್ಮ ಮಕ್ಕಳ ಪಾಲನೆ ಪೋಷಣೆ ಮಾಡುವುದು ತಂದೆ-ತಾಯಿಗಳ ಜವಾಬ್ದಾರಿ, ನಿಜ. ಆದರೆ ಅವರಿಗೆ ಬೇಡದ ಮಗುವಿನ ಹೊಣೆಗಾರಿಕೆ ಅವರ ಮೇಲೆ ಬಿದ್ದಿರುವುದು ವೈದ್ಯರ ನಿರ್ಲಕ್ಷ್ಯದಿಂದ. ಸಂತರಾ ಈಗಾಗಲೇ ಏಳು ಮಕ್ಕಳಿದ್ದ ಬಡ ಮಹಿಳೆ. ಅವಳಿಗೆ ಮತ್ತೊಂದು ಮಗುವನ್ನು ನೋಡಿಕೊಳ್ಳುವ ಆರ್ಥಿಕ ಚೈತನ್ಯ ಇಲ್ಲ ಎಂದು ಹೇಳಿ ಸರ್ವೋಚ್ಚ ನ್ಯಾಯಾಲಯ ಹರಿಯಾಣ ರಾಜ್ಯ ಸರ್ಕಾರದ ಮೊಕದ್ದಮೆಯನ್ನು ವಜಾ ಮಾಡಿದೆ.

ಈ ರೀತಿ ತನ್ನ ಹಕ್ಕಿಗಾಗಿ ಹೋರಾಡಿದ ಬಡಮಹಿಳೆ ಸಂತರಾಳ ಸಾಹಸವನ್ನು ಮೆಚ್ಚಿಕೊಳ್ಳಬೇಕು. ಅನ್ಯಾಯವಾದಾಗ ಕರ್ತವ್ಯದಲ್ಲಿನ ಲೋಪದಿಂದಾಗಿ ಹಾನಿಯಾದಾಗ ನೊಂದವರು ಪರಿಹಾರ ಕೇಳುವ ಧೈರ್ಯ ಮಾಡಬೇಕು. ಎಂದರೆ ಮುಂದಾದರೂ ಈ ರೀತಿಯ ಕರ್ತವ್ಯಲೋಪ ನಡೆಯಲಾರದು. ■

# ದಲಿ ಮಹಿಳಾ ಸಂಕಥನ

**The silken swing:** Editors: Fernando Franco, Jyotsna Macwan, Suguna Ramanathan, Stree, Rs. 450

'ದಿ ಸಿಲ್ಕನ್ ಸ್ವಿಂಗ್' ಅರ್ಥಾತ್ ರೇಶಿಮೆಯ ಜೋಕಾಲಿ ಎಂದೇ ಈ ಪುಸ್ತಕದ ಹೆಸರು. ಹೆಸರು ಎಷ್ಟು ವಿನೂತನವೋ, ಪುಸ್ತಕದ ವಸ್ತು ಸಹ ಅಷ್ಟೇ ವಿನೂತನವಾಗಿದೆ. ವಂಕಾರ್, ಭಾಂಗಿ ಮತ್ತು ಕೋಲಿ-ಪಟೇಲ್ ಇವೆಲ್ಲ ಗುಜರಾತಿನ ದಲಿತ ಕೋಮುಗಳು. ಜಾತಿ ಆಧಾರಿತ ಸಮಾಜದ ಕಟ್ಟುಪಾಡುಗಳಲ್ಲಿ ನಲುಗುತ್ತಿರುವ ಈ ಕೋಮಿನ ಮಹಿಳೆಯರೇ ಈ ಪುಸ್ತಕದ ವಸ್ತು. ನಗರದಲ್ಲೇ ಹುಟ್ಟಿ ಬೆಳೆದಿರುವವರಿಗೆ ಗ್ರಾಮೀಣ ಪರಿಸರದ ಈ ಅನಾಮಿಕ ಮುಖಗಳನ್ನು 'ಸಿಲ್ಕನ್ ಸ್ವಿಂಗ್' ಪರಿಚಯಿಸುತ್ತದೆ. ಅವರ ದನಿಗಳನ್ನು ಧ್ವನಿಸುತ್ತದೆ. ಅಷ್ಟಕ್ಕೂ ಇವು ಅಪರೂಪದ ದನಿಗಳು; ನಾಗರಿಕ ಸಮಾಜದ ಗಲಭೆ ಗೊಂದಲಗಳ ನಡುವೆ 'ಸ್ವರ' ಕಳೆದುಕೊಂಡಿರುವ ದನಿಗಳು; ನಗರಕ್ಕೆ ದೂರವಾಗಿ ಬದುಕುವವರ, ಧ್ವನಿ ಇಲ್ಲದವರು ದನಿಗಳು.

ಈ ಪುಸ್ತಕ ಅನಾಮಿಕ ಮುಖಗಳನ್ನೆಯೋ ಪರಿಚಯಿಸುತ್ತದೆ. ಆದರೆ ಅಸಹಾಯಕತೆಯನ್ನಲ್ಲ. ಬದಲಿಗೆ ಅದಕ್ಕೆ ವಿರುದ್ಧವಾದುದನ್ನೇ ನಿರೂಪಿಸುತ್ತದೆ. ಅಂದರೆ, ನಾಗರಿಕ ಸಮಾಜದ ಅಂಚಿನಲ್ಲಿರುವ ದಲಿತ ಮಹಿಳೆಯರಿಗೂ ತಮ್ಮದೇ ಆದ ದೃಷ್ಟಿಕೋನಗಳಿವೆ ಎಂಬುದನ್ನು ಈ ಪುಸ್ತಕ ಹೇಳುತ್ತದೆ. ಈ ಮಹಿಳೆಯರಿಗೆ ಮದುವೆ, ಸೆಕ್ಸ್, ಕೌಟುಂಬಿಕ ಬಂಧನಗಳು, ಕಟ್ಟುಪಾಡುಗಳು ಹೀಗೆ ಜೀವನದ ಸರ್ವಸ್ವಗಳ ಬಗ್ಗೆ ಅವರದೇ ಆದ ನಿಲುವುಗಳಿವೆ. ಸಭ್ಯ ಸಮಾಜದ ಮಹಿಳೆಯರ ಬುದ್ಧಿಹೀನ ಹಾಗೂ ವಿವೇಚನಾ ಶೂನ್ಯ ದೃಷ್ಟಿಕೋನಕ್ಕಿಂತ ಭಿನ್ನವಾಗಿರುವ ಇವರ ವಿಚಾರಗಳಲ್ಲಿ ಹೃದಯವಂತಿಕೆ ಇದೆ. ಪ್ರೌಢಿಮೆಯೂ ತುಂಬಿದೆ.

ಅಹಮದಾಬಾದಿನ 'ಬಿಹೇವಿಯರಲ್ ಸೈನ್ಸ್ ಸೆಂಟರ್' ವರ್ಷಗಟ್ಟಲೆ ನಡೆಸಿದ ಅಧ್ಯಯನ ಹಾಗೂ ಸಂಶೋಧನೆಯ ಪರಿಣಾಮವಾಗಿ 'ದಿ ಸಿಲ್ಕನ್ ಸ್ವಿಂಗ್' ರೂಪುಗೊಂಡಿದೆ. ಲೇಖಕರುಗಳು ಅಧ್ಯಯನ ಸಂಶೋಧನೆಗಳ ಮಾಹಿತಿ/ಅಂಕಿ-ಅಂಶಗಳನ್ನು ಕ್ರೋಢೀಕರಿಸಿ ಬರಡು ಬರಡಾದ ಬೃಹತ್ ಗಾತ್ರದ ಸಂಪುಟವನ್ನು ಹೊರತರುವ ಗೋಜಿಗೆ ಹೋಗದೆ, ಅಧ್ಯಯನಕ್ಕೆ ಸಾಮಗ್ರಿಯಾದ ಮಹಿಳೆಯರ ಮಾತುಗಳನ್ನೇ ಯಥಾವತ್ತಾಗಿ ಬಿಂಬಿಸಿದ್ದಾರೆ.

ಬಂಧುಗಳು ಹಾಗೂ ಮತಧರ್ಮಗಳು ಅಂಗಗಳಾಗಿರುವ ಸಮಾಜದ ನಿಷ್ಠುರ ವ್ಯವಸ್ಥೆಯಲ್ಲಿ ಮಹಿಳೆಯರು ಬಲಿಪಶುಗಳು ಎಂಬಂತಹ ಧೋರಣೆ ಈ ಪುಸ್ತಕದಲ್ಲಿಲ್ಲ. ಏನಿದ್ದರೂ ಈ ದಲಿತ ಮಹಿಳೆಯರ ಮಾತುಗಳನ್ನು ಅವರ ವೈಚಾರಿಕತೆಯನ್ನು ಓದುಗರಿಗೆ ತಲುಪಿಸಲು ಈ ಪುಸ್ತಕ ಪ್ರಯತ್ನಿಸುತ್ತದೆ. ಆದರೆ ಇದೊಂದು ಶೈಕ್ಷಣಿಕ ಗ್ರಂಥವೂ ಆಗಿರುವುದರಿಂದ ಮಾತುಗಳು ದನಿಗಳು ಸಂಶೋಧನಾ ವಿದ್ವಾಂಸರ ನಿಯಂತ್ರಣಗಳನ್ನು ಹಾದು ಹೊರಬಂದಿವೆ.

"ನಮ್ಮ ವಿಶ್ಲೇಷಣೆಗಳು ಇಷ್ಟೇ ಸಾಕು. ಇನ್ನು ಅವರ ದನಿಗಳನ್ನೇ ಕೇಳೋಣ ಎಂದು ನಮಗನ್ನಿಸುತ್ತದೆ" ಎಂದು ಲೇಖರುಗಳು ಅತ್ಯಂತ ಸಮಂಜಸವಾಗಿಯೇ ಪ್ರಸ್ತಾಪಿಸಿದ್ದಾರೆ. ಅವರ ಈ ಅನಿಸಿಕೆ ಕೇವಲ ಪ್ರಸ್ತಾವನೆಯಾಗಿಯೇ ಉಳಿದಿಲ್ಲ. ಅವರಿಗನ್ನಿಸಿದ್ದನ್ನು ಅವರು ಅಕ್ಷರಶಃ ಮಾಡಿ ತೋರಿಸಿದ್ದಾರೆ. ವಿವಿಧ ಶಿಬಿರಗಳಲ್ಲಿ ಸಭೆಗಳಲ್ಲಿ ಹಾಗೂ ಸಮೀಕ್ಷೆಗಳ ಕಾರ್ಯಕ್ಷೇತ್ರಗಳಲ್ಲಿ ಮಹಿಳೆಯರಿಗೆ ಮನಬಿಚ್ಚಿ ಮಾತಾಡಲು ಅವಕಾಶ ಮಾಡಿಕೊಡಲಾಗಿದೆ. ಗಂಡಂದಿರು, ಪ್ರೇಮ-ಪ್ರೀತಿಯ ಪ್ರಕರಣಗಳು, ಅತ್ತೆಮಾವಂದಿರು ಇತ್ಯಾದಿ ತಮ್ಮ ಜೀವನಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳ ಬಗ್ಗೆ ಅವರು ಮುಕ್ತವಾಗಿ ಮಾತಾಡಿದ್ದಾರೆ.

ಲೇಖಕರುಗಳ ಪ್ರಯತ್ನದ ಫಲಿತಾಂಶವಂತೂ ನಿಜಕ್ಕೂ ಈ ಮಹಿಳೆಯರ ಕುರಿತು ಅರಿವು ಮೂಡಿಸುವಂತಹದ್ದೇ ಆಗಿದೆ. ಗುಜರಾತಿನ ಭಾಲ್ ಪ್ರದೇಶದ ಕೆಳವರ್ಗದ ಈ ಮಹಿಳೆಯರು ತಮ್ಮ ಪಾಲಿನ ಪ್ರಪಂಚದ ಜೊತೆ ಹೇಗೆ ಏಗುತ್ತಾರೆ ಎಂಬುದನ್ನು ಈ ಪ್ರಯತ್ನ ತೆರೆದಿಡುತ್ತದೆ. ಯಾವುದೇ ಅಡತಡೆಗಳು ಕಷ್ಟ-ಒತ್ತಡಗಳು ಎದುರಾದಾಗ ಅವರು ತೋರುವ ಧೈರ್ಯ, ಕಲ್ಪನಾಶಕ್ತಿ, ಹಾಸ್ಯ ಮನೋಭಾವ ಹಾಗೂ ಉತ್ಸಾಹ ಹುಮ್ಮಸ್ಸುಗಳು ಮೆಚ್ಚುಗೆಗೆ ಪಾತ್ರವಾಗುತ್ತದೆ.

ಉತ್ತರ ಭಾರತದ ಇತರ ಪ್ರಾಂತ್ಯಗಳ ಮಹಿಳೆಯರಿಗೆ ಹೋಲಿಸಿದಾಗ ಇವರ ಜೀವನ ವಿಚಾರಧಾರೆಗಳು ಎಷ್ಟು ಆಧುನಿಕವಾಗಿದೆ ಎಂಬುದನ್ನು 'ಸಿಲ್ಕನ್ ಸ್ವಿಂಗ್' ತಿಳಿಸುತ್ತದೆ. ವಿವಾಹ ವಿಚ್ಛೇದನ ಮುಂತಾದ ಸವಲತ್ತುಗಳು ಮೇಲ್ವರ್ಗದವರಿಗೆ ಆಧುನಿಕತೆಯ ಹೆಸರಿನಲ್ಲಿ ಲಭ್ಯವಾಗುತ್ತಿವೆ. ಆದರೆ ದಲಿತ ಜನಾಂಗದಲ್ಲಿ ಇದು ಲಾಗಾಯ್ತಿನಿಂದ

ರೂಢಿಯಲ್ಲಿದೆ ಎಂಬುದು ಚಿಂತನಾರ್ಹ ಅಂಶವಾಗಿದೆ. ವಿಧವೆಯರೂ ಹಾಗೂ ಅವರ ದುರ್ಬಲ ಬಾಳಿನ ಕತೆಗಳು ಸುದ್ದಿ ಮಾಡುತ್ತಿರುವಾಗ, ದಲಿತರಲ್ಲಿ ವಿಧವಾ ವಿವಾಹ ಎಂದಿನಿಂದಲೋ ಜಾರಿಯಲ್ಲಿದೆ. ಜೀವನದ ಕಷ್ಟಕರ ಮತ್ತು ದುಃಖದ ಸನ್ನಿವೇಶಗಳಲ್ಲಿ ದಲಿತ ಮಹಿಳೆಯರಿಗೆ ಸಾಮಾಜಿಕ ಹಾಗೂ ನ್ಯಾಯಯುತ ಮಾರ್ಗಗಳು ತೆರೆದುಕೊಳ್ಳುತ್ತಿದ್ದವು ಎಂಬ ವಾಸ್ತವಾಂಶಗಳು ಈ ಎರಡು ಪದ್ಧತಿಗಳು ಎತ್ತಿ ತೋರಿಸುತ್ತವೆ. ಹಲವಾರು ಜೀವನಗಳ ನೈಜ ಚಿತ್ರಣಗಳನ್ನು ಉದಾಹರಿಸುವುದರ ಮೂಲಕ ದಲಿತ ಮಹಿಳೆಯರ ಗುಣಾವಗುಣಗಳ ಒಳನೋಟವನ್ನು ಈ ಪುಸ್ತಕ ಕೊಡುತ್ತದೆ.

ದೇವಿಕಾ ರಾಥೋರ್ ಕರಿಯ ಮನುಷ್ಯನೊಬ್ಬನ ಹೆಂಡತಿ. ಆದರೆ ಒಬ್ಬ ಸ್ಫುರದ್ರೂಪಿ ಗಂಡಸೊಂದಿಗೆ ಕೂಡ ಅವಳು ಅನೈತಿಕ ಸಂಬಂಧ ಇಟ್ಟುಕೊಂಡಿದ್ದಳು. ಇವರಿಬ್ಬರ ಮಧ್ಯೆ ಒಬ್ಬರನ್ನು ಆಯ್ಕೆ ಮಾಡುಕೊಳ್ಳಬೇಕೆಂದು ಅವಳಿಗೆ ಹೇಳಿದಾಗ 'ನಾನು ಕಾಲಿಯೋ (ಕರಿಯ)ನೊಂದಿಗೇ ಇರುತ್ತೇನೆ' ಎನ್ನುತ್ತಾಳೆ ದೇವಿಕಾ. ದಲಿತ ಮಹಿಳೆಯರ ಯಥಾವತ್ ಸ್ಥಿತಿಯನ್ನು ತಿಳಿಸುವುದಕ್ಕಾಗಿ ಅನೇಕ ಪ್ರಸಂಗಗಳ ಅಧ್ಯಯನವನ್ನು ಈ ಜೀವನದ ಕತೆಗಳನ್ನೂ ಈ ಪುಸ್ತಕ ತಿಳಿಸುತ್ತದೆ.

ವಿವಿಧ ಕಾರಣಗಳನ್ನು ಮುಂದೊಡ್ಡಿ ಮಹಿಳೆಯರಿಗೆ ಅನೇಕ ರೀತಿಗಳಲ್ಲಿ ಅವಮಾನ ಮಾಡಲಾಗುತ್ತದೆ. ಈ ಬಗ್ಗೆ ಸ್ಪಷ್ಟ ವಿವರಣೆಗಳನ್ನು ಕೂಡ ಈ ಪುಸ್ತಕದಲ್ಲಿವೆ. ಉದಾಹರಣೆಗೆ ಮಕ್ಕಳೇ ಇಲ್ಲದಿರುವ ಅಥವಾ ಕೇವಲ ಹೆಣ್ಣು ಮಕ್ಕಳೇ ಇರುವ ಮಹಿಳೆಯರ ಜೀವನ ಇಲ್ಲಿನ ಜನರ ದೃಷ್ಟಿಯಲ್ಲಿ ಜೀವನವೇ ಅಲ್ಲ. 'ಹೊಸದಾಗಿ ಹುಟ್ಟಿದ ಗಂಡು ಕೂಸು ಗುಡಿ ಇದ್ದಾಂಗ, ಹೊಸದಾಗಿ ಹುಟ್ಟಿದ ಹೆಣ್ಣು ಕೂಸು ಕಲ್ಲಿದ್ದಾಂಗ' ಎಂಬ ಹಾಡು ಇವರ ಭಾವದೆನೆಗೆ ದ್ಯೋತಕವಾಗಿದೆ.

ಈ ಪುಸ್ತಕದಲ್ಲಿ 'ಮಹಿಳೆಯರು ಹೇಳುವ ಕತೆಗಳು' ಹಾಗೂ ಮಹಿಳೆಯರು ಹಾಡುವ ಹಾಡುಗಳು' ಎಂಬ ಅಧ್ಯಾಯಗಳೇ ಇವೆ. ಈ ಕತೆ ಹಾಗೂ ಹಾಡುಗಳಲ್ಲೇ ಇವರ ಜೀವನದ ಒಳಾರ್ಥ ಬಹಳ ಪರಿಣಾಮಕಾರಿಯಾಗಿ ಅಭಿವ್ಯಕ್ತವಾಗುತ್ತದೆ.

ನಗರಕ್ಕೆ ಅನತಿ ದೂರದಲ್ಲಿರುವ ದಲಿತ ಮಹಿಳೆಯರ ತುಡಿತಗಳು ಮತ್ತು ಅವರ ನಿಷ್ಕಪಟ ಜೀವನಗಳ ಚಿತ್ತಣ ಇರುವ 'ಸಿಲ್ಕನ್ ಸ್ವಿಂಗ್' ಮಾಮೂಲಿಗಿಂತ ಬೇರೆಯೇ ಆದ ಪುಸ್ತಕ. ಸರಾಗವಾಗಿ ಓದಿಸಿಕೊಂಡು ಹೋಗುವ, ಸತ್ವ ಭರಿತ ಪುಸ್ತಕ. ■

RNI No. 45577/88

"Achala" 108, Skyline Surabhi,
14-9, Vidyapeeta Road, BSK III Stage,
Bangalore - 560085

To: Smt/Sri

CPMG/KA/BG-8/2001
Book-Post/News Letter